# ತಂತ್ರಸಾರೋಕ್ತ

# ದೇವಪೂಜಾಪದ್ಧತಿ



ಸಂಗ್ರಹ : ಪಂ. ವಾದಿರಾಜಾಚಾರ್ಯ ಕರಣಂ

ಪ್ರಕಾಶನ : ವಿಶ್ವಮಧ್ವಮಹಾಪರಿಷತ್, ಉತ್ತರಾದಿಮಠ, ಬೆಂಗಳೂರು.

ತಂತ್ರಸಾರೋಕ್ತ ದೇವಪೂಜಾಪದ್ಧತಿ

ಸಂಗ್ರಹ : ಪಂ.ವಾದಿರಾಜಾಚಾರ್ಯ ಕರಣಂ

ಮೊದಲ ಮುದ್ರಣ : ಏಪ್ರಿಲ್ 2014 ಪ್ರತಿಗಳು 2000
ದ್ವಿತೀಯ ಮುದ್ರಣ : ನವೆಂಬರ್ 2014 ಪ್ರತಿಗಳು 2000

ಪುಟಗಳು : 120



ಬೆಲೆ : ಭಕ್ತಿಪೂರ್ವಕ ದೇವರ ಪೂಜೆ

**Vishva Madhwa Maha Parishat**
#11 2nd Floor Uttaradi Math Building.
Uttaradi Math Road, Shankarpuram,
Basavanagudi BANGALORE - 4
Phone : 080 26603692, e-mail-vmmp05@gmail.com

ಅಕ್ಷರ ಜೋಡಣೆ : ವಿಶ್ವಮಧ್ವಮಹಾಪರಿಷತ್ ಸಂಶೋಧನ ವಿಭಾಗ

ಮುದ್ರಣ : ವಾಗರ್ಥ, ಬೆಂಗಳೂರು-೧೯. vagartha@yahoo.com

॥ ಶ್ರೀದಿಗ್ವಿಜಯರಾಮೋ ವಿಜಯತೇ ॥

ಜಗದ್ಗುರು ಶ್ರೀಮನ್ಮಧ್ವಾಚಾರ್ಯಮೂಲಮಹಾಸಂಸ್ಥಾನ

ಶ್ರೀಮದುತ್ತರಾದಿಮಠಾಧೀಶರಾದ

**ಶ್ರೀ ಶ್ರೀ ೧೦೦೮ ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರ**

# ''ಅನುಗ್ರಹ ಸಂದೇಶ''

ಸಮಸ್ತರಿಗೆ, ದೇಶ-ಕಾಲಗಳನ್ನು, ದೇಹೇಂದ್ರಿಯಾದಿಗಳನ್ನು, ಅನ್ನ-ನೀರುಗಳನ್ನು, ಮನೆ-ಗೃಹಿಣಿಯರನ್ನು ಯಥಾಯೋಗ್ಯವಾಗಿ ನೀಡಿದ ಕರುಣೆಯ ಕಡಲು ಶ್ರೀಕೃಷ್ಣ.

ಭಕ್ತರ ಭವಬಂಧನವನ್ನು ಪರಿಹರಿಸುವ ಅನಿಮಿತ್ತಬಂಧು ಶ್ರೀಹರಿ.

ಅನಂತಜೀವರಿಗೆ ಅನಂತಾನಂತ ಉಪಕಾರವನ್ನು ಮಾಡಿದವನು ಭಗವಂತ.

ಮೋಕ್ಷವಾಗುವ ತನಕ ಪ್ರತಿಯೊಂದು ಕಣ, ಪ್ರತಿಯೊಂದು ಕ್ಷಣ ದೇವರು ಹಾಕಿದ ಭಿಕ್ಷೆ. ನಮ್ಮ ಬದುಕೆಲ್ಲ ಆ ಭಗವಂತನ ಭಿಕ್ಷೆಯಾಗಿದೆ.

ಹೀಗಾಗಿ ನಾವು ತಿನ್ನುವ, ತೊಡುವ, ವಿಹಿತವಾದ ಸಮಸ್ತವಸ್ತುಗಳನ್ನು ದೇವರಿಗೆ ಸಮರ್ಪಿಸಬೇಕು. ಅದಕ್ಕಾಗಿ ನಿತ್ಯವೂ ದೇವರನ್ನು ಪೂಜಿಸಬೇಕು. ದೇವರನ್ನು ಪೂಜಿಸಿದವನಿಗೆ ಮಾತ್ರ ಭುಜಿಸುವ ಅವಕಾಶ.

ಅಲ್ಲದೇ ವೈಶ್ವದೇವ-ಬಲಿಹರಣಗಳನ್ನು ಮಾಡುವ ಮೂಲಕ ಗೃಹಸ್ಥ ಪಂಚಸೂನಾದೋಷಗಳನ್ನು ಕಳೆದುಕೊಳ್ಳುತ್ತಾನೆ. ಪೂಜಾ-ವೈಶ್ವದೇವ-ಬಲಿಹರಣಗಳ ಕ್ರಮವನ್ನು ತಿಳಿಸಲು ಈ **ತಂತ್ರಸಾರೋಕ್ತ ದೇವಪೂಜಾಪದ್ಧತಿ** ಎಂಬ ಹೊತ್ತಿಗೆ ಸಿದ್ಧವಾಗಿದೆ. ಇದರ ಉಪಯೋಗವನ್ನು ಸದ್ಭಕ್ತರೆಲ್ಲರೂ ಪಡೆದುಕೊಳ್ಳಬೇಕು. ಈ ಹೊತ್ತಿಗೆಯನ್ನು ಸಂಗ್ರಹ ಮಾಡಿದ ನಮ್ಮ ಪ್ರಿಯಶಿಷ್ಯನಾದ ವಾದಿರಾಜಾಚಾರ್ಯ ಕರಣಂ ಇವನಿಂದ ಮತ್ತಿಷ್ಟು ಹೆಚ್ಚು ವೇದವ್ಯಾಸರ ಶ್ರೀಮದಾಚಾರ್ಯರ ಸೇವೆಯಾಗಲಿ ಎಂದು ಅಸ್ಮದುಪಾಸ್ಯ ಮೂಲಸೀತಾಸಮೇತಮೂಲರಾಮ, ದಿಗ್ವಿಜಯರಾಮ ವೇದವ್ಯಾಸದೇವರಲ್ಲಿ ಪ್ರಾರ್ಥಿಸುತ್ತೇವೆ.

ಇತಿ ಅನೇಕ ನಾರಾಯಣ ಸ್ಮರಣೆಗಳು

ಶ್ರೀಸತ್ಯಾತ್ಮತೀರ್ಥ ಶ್ರೀಪಾದಂಗಳವರು ಉತ್ತರಾದಿಮಠ

|| ಶ್ರೀಮನ್ನಾರಾಯಣ ಏವ ಶರಣಮ್ ||

|| ಗುರುಮಧ್ವೇಶಾಯ ನಮಃ || || ಶ್ರೀಗುರುಭ್ಯೋ ನಮಃ ||

# ತಂತ್ರಸಾರೋಕ್ತ ದೇವಪೂಜಾಪದ್ಧತಿ

ಸೂಚನೆ- ಸೂರ್ಯೋದಯಕ್ಕಿಂತಲೂ ಪೂರ್ವದಲ್ಲಿಯೇ ಸ್ನಾನ-ಸಂಧ್ಯಾವಂದನ-ಜಪಾದಿಗಳನ್ನು ಮುಗಿಸಬೇಕು. ವಸ್ತ್ರಶೋಧಿತವಾದ ಅಗ್ರ್ಯೋದಕವನ್ನು ಏಳು ಅಥವಾ ಐದು ಕಲಶಗಳಲ್ಲಿ ತುಂಬಿ ನಖಸ್ಪರ್ಶ-ವಾಗದಂತೆ ವಸ್ತ್ರ ಮುಚ್ಚಿ ತರಬೇಕು. ಒಂದು ಕಲಶದಲ್ಲಿ ಜಲವನ್ನು ತಂದಾಗ ಮನೆಯಲ್ಲಿಯೇ ಏಳು ಅಥವಾ ಐದು ಕಲಶಗಳಲ್ಲಿ ಆ ಜಲವನ್ನು ವಿಭಾಗ ಮಾಡಿಟ್ಟುಕೊಳ್ಳಬೇಕು.

ತುಳಸೀ-ದೂರ್ವಾ-ಪುಷ್ಪಗಳನ್ನು, ಗಂಧಾಕ್ಷತೆಗಳನ್ನು, ಸ್ವಾದೂದಕವನ್ನು ದೇವರ ಪೂಜೆಗಾಗಿ ಸಿದ್ಧಮಾಡಿಟ್ಟುಕೊಳ್ಳಬೇಕು. ಸ್ನಾನಕ್ಕಿಂತಲೂ ಮೊದಲು ದೂರ್ವಾ-ಪುಷ್ಪಗಳನ್ನು, ಸ್ನಾನವಾದ ನಂತರ ತುಲಸಿಯನ್ನು ಸಂಗ್ರಹಿಸಬೇಕು. ಪುಷ್ಪಗಳನ್ನು ಸ್ತ್ರೀಯರು ತರಬಹುದು. ಸ್ತ್ರೀಯರು ತುಲಸೀಚಯನವನ್ನು ಮಾಡಬಾರದು.

**ಜಯತಿ ಹರಿರಚಿಂತ್ಯಃ ಸರ್ವದೇವೈಕವಂದ್ಯಃ**
**ಪರಮಗುರುರಭೀಷ್ಟಾವಾಪ್ತಿದಃ ಸಜ್ಜನಾನಾಮ್ ।**
**ನಿಖಿಲಗುಣಗಣಾರ್ಣೋ ನಿತ್ಯನಿರ್ಮುಕ್ತದೋಷಃ**
**ಸರಸಿಜನಯನೋಽಸೌ ಶ್ರೀಪತಿರ್ಮಾನದೋ ನಃ ॥**

**ನಾರಾಯಣಾಯ ಪರಿಪೂರ್ಣಗುಣಾರ್ಣವಾಯ**
**ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।**
**ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ-**
**ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥**

**ಅಭ್ರಮಂ ಭಂಗರಹಿತಮಜಡಂ ವಿಮಲಂ ಸದಾ ।**
**ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಮ್ ॥**

(ಈ ಶ್ಲೋಕಗಳನ್ನು ಪಠಿಸುತ್ತಾ ನಾರಾಯಣನನ್ನು, ಮೂಲಗುರುಗಳಾದ ಶ್ರೀಮದಾಚಾರ್ಯರನ್ನು ನಮಸ್ಕರಿಸಬೇಕು.)

ಮಧ್ಯಾಹ್ನದಲ್ಲಿ ಮತ್ತೆ ಸ್ನಾನ ಮಾಡಬೇಕು. ಮಡಿಬಟ್ಟೆಯನ್ನು ಉಟ್ಟುಕೊಳ್ಳಬೇಕು. ನಾಮ-ಮುದ್ರೆಗಳನ್ನು ಧರಿಸಬೇಕು. ಮಧ್ಯಾಹ್ನಸಂಧ್ಯಾ-ವಂದನೆಯನ್ನು ಮಾಡಿ ದೇವರ ಪೂಜೆಯನ್ನು ಪ್ರಾರಂಭ ಮಾಡಬೇಕು. ಮಧ್ಯಾಹ್ನದಲ್ಲಿ ಪೂಜಿಸುವುದು ಯೋಗ್ಯ. ಅಥವಾ ಪ್ರಾತಃಕಾಲದಲ್ಲಿಯೇ ಸ್ನಾನಮಾಡಿ ದೇವರನ್ನು ಪೂಜಿಸಬಹುದು.

ಸ್ನಾನಮಾಡಿ ಮನೆಗೆ ಬರುವಾಗ ಮನೆಯ ಹೊರಗೆ ಕೈಕಾಲುಗಳನ್ನು ತೊಳೆದುಕೊಳ್ಳಬೇಕು. ದೇವರ ಮನೆಯ ದ್ವಾರದ ಹತ್ತಿರ ಹೋಗಿ ಕೆಳಗೆ ತಿಳಿಸಿದಂತೆ ದ್ವಾರಪಾಲಕರನ್ನು ನಮಸ್ಕರಿಸಬೇಕು.

## ದ್ವಾರಪಾಲನಮನಮ್

**ಪೂರ್ವದ್ವಾರೇ ಶ್ರಿಯೈ ನಮಃ ಜಯಾಯ ನಮಃ, ವಿಜಯಾಯ ನಮಃ ।**
**ದಕ್ಷಿಣದ್ವಾರೇ ಶ್ರಿಯೈ ನಮಃ ಬಲಾಯ ನಮಃ, ಪ್ರಬಲಾಯ ನಮಃ ।**
**ಪಶ್ಚಿಮದ್ವಾರೇ ಶ್ರಿಯೈ ನಮಃ ನಂದಾಯ ನಮಃ, ಸುನಂದಾಯ ನಮಃ ।**
**ಉತ್ತರದ್ವಾರೇ ಶ್ರಿಯೈ ನಮಃ ಕುಮುದಾಯ ನಮಃ,ಕುಮುದಾಕ್ಷಾಯ ನಮಃ ।**

**ಇತಿ ದ್ವಾರಪಾಲಾನ್ ಪೂಜಯಿತ್ವಾ ತದನುಜ್ಞಾಂ ಅವಾಪ್ನುಯಾತ್ ।**

ಹೀಗೆ ಭಕ್ತಿಯಿಂದ ದ್ವಾರಪಾಲಕರನ್ನು ನಮಸ್ಕಾರ ಮಾಡಿ ಅವರನ್ನು ಪೂಜಿಸಬೇಕು. ಭಗವಂತನ ಪೂಜೆಗಾಗಿ ದ್ವಾರಪಾಲಕರ ಅನುಜ್ಞೆಯನ್ನು ಪಡೆಯಬೇಕು.

## ದೇವಗೃಹಪ್ರವೇಶಃ

**ವಾಯವಿತ್ಯಸ್ಯ ಮಧುಚ್ಛಂದಾ ವೈಶ್ವಾಮಿತ್ರಃ ಋಷಿಃ, ವಾಯುಃ ದೇವತಾ, ಗಾಯತ್ರೀ ಛಂದಃ, ದೇವಗೃಹಕವಾಟೋದ್ಘಾಟನೇ ವಿನಿಯೋಗಃ ।**

**ಓಂ ವಾಯವಾ ಯಾಹಿ ದರ್ಶತೇಮೇ ಸೋಮಾ ಅರಂಕೃತಾಃ ।**
**ತೇಷಾಂ ಪಾಹಿ ಶ್ರುಧೀ ಹವಮ್ ॥ ಋ.ಸಂ.1.2.1॥**

**ಇತಿ ಮಂತ್ರಂ ಪಠನ್ ದೇವಗೃಹದ್ವಾರಂ ಉದ್ಘಾಟಯೇತ್ ।**

(ಈ ಮಂತ್ರವನ್ನು ಪಠಿಸುತ್ತಾ ದೇವರ ಮನೆಯ ಬಾಗಿಲನ್ನು ತೆಗೆಯಬೇಕು.)

**ವಂದೇ ವಿಷ್ಣುಂ ನಮಾಮಿ ಶ್ರಿಯಮಥ ಚ ಭುವಂ ಬ್ರಹ್ಮವಾಯೂ ಚ ವಂದೇ ।**
**ಗಾಯತ್ರೀಂ ಭಾರತೀಂ ತಾಮಪಿ ಗರುಡಮನಂತಂ ಭಜೇ ರುದ್ರದೇವಮ್ ।**
**ದೇವೀಂ ವಂದೇ ಸುಪರ್ಣೀಮಹಿಪತಿದಯಿತಾಂ ವಾರುಣೀಮಪ್ಯುಮಾಂ ತಾಂ**
**ಇಂದ್ರಾದೀನ್ ಕಾಮಮುಖ್ಯಾನಪಿ ಸಕಲಸುರಾನ್ ತದ್ಗುರೂನ್ ಮದ್ಗುರೂಂಶ್ಚ ॥**

**ವಂದೇ ವಿಷ್ಣುಂ ನಮಾಮಿ...** ಎಂಬ ಶ್ಲೋಕವನ್ನು ಪಠಿಸುತ್ತಾ ಬ್ರಾಹ್ಮಣ-ಋಷಿ-ದೇವತೆಗಳನ್ನು ನಮಸ್ಕರಿಸಬೇಕು.

**ನಮೋ ಬ್ರಹ್ಮಣ್ಯದೇವಾಯ ಗೋಬ್ರಾಹ್ಮಣಹಿತಾಯ ಚ ।**
**ಜಗದ್ಧಿತಾಯ ಕೃಷ್ಣಾಯ ಗೋವಿಂದಾಯ ನಮೋ ನಮಃ ॥**

ಈ ಶ್ಲೋಕವನ್ನು ಪಠಿಸುತ್ತಾ ಮೂರು ಚಪ್ಪಾಳೆಯನ್ನು ಬಾರಿಸಿ, ಹೊಸ್ತಿಲನ್ನು ಸ್ಪರ್ಶ ಮಾಡದೇ ಬಲಗಾಲನ್ನು ಒಳಗೆ ಇಡುತ್ತಾ,

**ಯಚ್ಚ ಕಿಂಚಿತ್ ಜಗತ್ ಸರ್ವಂ ದೃಶ್ಯತೇ ಶ್ರೂಯತೇಽಪಿ ವಾ ।**
**ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥ ಮ.ನಾ.ಉ॥**

ಈ ಮಂತ್ರವನ್ನು ಪಠಿಸುತ್ತಾ ದೇವರ ಮನೆಯನ್ನು ಪ್ರವೇಶಿಸಬೇಕು.

## ದೀಪಪ್ರಜ್ವಾಲನಮ್

**ಅಗ್ನಿನೇತ್ಯಸ್ಯ ಕಾಣ್ವಃ ಮೇಧಾತಿಥಿಃ ಋಷಿಃ, ಅಗ್ನಿರ್ದೇವತಾ, ಗಾಯತ್ರೀ ಛಂದಃ, ದೀಪಪ್ರಜ್ವಾಲನೇ ವಿನಿಯೋಗಃ ।**

**ಓಂ ಅಗ್ನಿನಾಗ್ನಿಃ ಸಮಿಧ್ಯತೇ ಕವಿರ್ಗೃಹಪತಿರ್ಯುವಾ । ಹವ್ಯವಾಡ್ ಜುಹ್ವಾಸ್ಯಃ ॥ ಋ.ಸಂ.1.12.6॥**

**ಇತಿ ಮಂತ್ರೇಣ ದೀಪಮುದ್ದೀಪ್ಯ,**
ಈ ಮಂತ್ರವನ್ನು ಪಠಿಸುತ್ತಾ ದೀಪವನ್ನು ಬೆಳಗಿಸಬೇಕು.

**ಈಕ್ಷಣೇನ ದಿವಿಷ್ಠಾನ್ ವಿಘ್ನಾನ್ ಉಚ್ಚಾಟಯೇತ್ ।**

ನೋಟದಿಂದ ದ್ಯುಲೋಕದಲ್ಲಿಯ ವಿಘ್ನಗಳನ್ನು ಪರಿಹರಿಸಿಕೊಳ್ಳಬೇಕು.

## ಭೂತೋಚ್ಚಾಟನಮ್

**ಅಪಸರ್ಪಂತ್ವಿತ್ಯಸ್ಯ ವಾಮದೇವ ಋಷಿಃ, ಭೂತಾನಿ ದೇವತಾಃ, ಅನುಷ್ಟುಪ್ ಛಂದಃ ಸಮಸ್ತಭೂತೋಚ್ಚಾಟನೇ ವಿನಿಯೋಗಃ ।**

**ಅಪಸರ್ಪಂತು ತೇ ಭೂತಾ ಯೇ ಭೂತಾ ಭುವಿ ಸಂಸ್ಥಿತಾಃ ।**
**ಯೇ ಭೂತಾ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ॥**

**ಇತಿ ಮಂತ್ರೇಣ ತಾಲತ್ರಯಂ ಕುರ್ವನ್ ಭೂತಾನುಚ್ಚಾಟಯೇತ್ ।**

ಈ ಮಂತ್ರವನ್ನು ಪಠಿಸುತ್ತಾ ಮೂರು ಬಾರಿ ಚಪ್ಪಾಳೆಯನ್ನು ಬಾರಿಸುತ್ತಾ ಎಲ್ಲ ಭೂತಗಳನ್ನು ದೂರ ಓಡಿಸಬೇಕು.

**ತತಃ ನಾರಾಚಮುದ್ರಯಾ ದಿಗ್ಬಂಧನಂ ಕೃತ್ವಾ ಸರ್ವವಿಘ್ನನಿವಾರಣಾರ್ಥಂ ಪಾಂತ್ವಸ್ಮಾನ್ ಇತಿ ಶ್ಲೋಕದ್ವಯಂ ಪಠೇತ್ ।**

ನಂತರ ಬಾಣಮುದ್ರದಿಂದ ಎಲ್ಲ ದಿಕ್ಕುಗಳನ್ನು ಬಂಧಿಸಬೇಕು. ಎಲ್ಲರೀತಿಯಾದ ವಿಘ್ನಗಳ ಪರಿಹಾರಕ್ಕಾಗಿ **ಪಾಂತ್ವಸ್ಮಾನ್...** ಎಂಬ ಎರಡು ಶ್ಲೋಕಗಳನ್ನು ಪಠಿಸಬೇಕು.

## ಪ್ರಾರ್ಥನಾ

**ತತಃ ಅರ್ಚಕಃ ವೇದಿಕಾಯಾ ಅಧಃ ಸ್ಥಿತ್ವಾ ವಿನಯಾವನತಕಂಧರಃ ದೇವಸ್ಯಾಭಿಮುಖಃ ಸನ್ ಕೃತಾಂಜಲಿಪುಟಃ ಭೂತ್ವಾ ಸಂಪ್ರಾರ್ಥಯೇತ ।**

ವೇದಿಕೆಯ ಕೆಳಗೆ ವಿನೀತನಾಗಿ ದೇವರಿಗೆ ಅಭಿಮುಖವಾಗಿ ನಿಂತುಕೊಂಡು ಕೈಗಳನ್ನು ಜೋಡಿಸಿ ದೇವರನ್ನು ಪ್ರಾರ್ಥಿಸಬೇಕು.

**ಲಕ್ಷ್ಮೀಕಾಂತ ನಮಸ್ತೇಽಸ್ತು ಸ್ವಾಮಿನ್ ಭೀತೋ ಭವಾಂಬುಧೇಃ ।**
**ಪೂಜಯಾಮ್ಯಹಮದ್ಯ ತ್ವಾಂ ಪ್ರಸೀದ ಪುರುಷೋತ್ತಮ ॥**

**ತ್ವಾಮೇವ ಶರಣಂ ಯಾಮಿ ಶರಣಾಗತವತ್ಸಲ ।**
**ಕುರುಷ್ವ ಸಫಲಾಂ ಪೂಜಾಂ ಪೂಜಾರ್ಹಂ ಮಾಂ ಚ ಮಾಧವ ॥**

ಈ ಶ್ಲೋಕಗಳನ್ನು ಪಠಿಸುತ್ತಾ ದೇವರನ್ನು ಪ್ರಾರ್ಥಿಸಬೇಕು.

**ಕಾಯಿಕಾನ್ ವಾಚಿಕಾನ್ ದೋಷಾನ್ ಮಾನಸಾನಪಿ ಸರ್ವದಾ ।**
**ವೈಷ್ಣವದ್ವೇಷಹೇತೂನ್ ಮೇ ಭಸ್ಮಸಾತ್ ಕುರು ಮಾಧವ ॥**

**ಅಪರಾಧಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ ।**
**ತಾನಿ ಸರ್ವಾಣಿ ಮೇ ದೇವ ಕ್ಷಮಸ್ವ ಮಧುಸೂದನ ॥**

**ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂ ಮಮ ।**
**ತಸ್ಮಾತ್ಕಾರುಣ್ಯಭಾವೇನ ರಕ್ಷ ರಕ್ಷ ರಮಾಪತೇ ॥ ಇತಿ ॥**

ಹೀಗೆ ದೇವರಲ್ಲಿ ತನ್ನ ದೋಷಗಳನ್ನು ಹೇಳಿಕೊಂಡು, ಕ್ಷಮೆಯನ್ನು ಪ್ರಾರ್ಥಿಸಬೇಕು.

## ಮಾನುಷಗಂಧನಿವಾರಣಮ್

**ಓಂ ಅಪ್ಯೈವಾಬೀಭತ್ಸಂತ ಮನುಷ್ಯಗಂಧಾಸ್ತ ಏತೇ ಧಾಯ್ಯೇ ಅಂತರದಧತ ।**

ಯೇಭ್ಯ ಇತ್ಯಸ್ಯ ಗಯಃ ಪ್ಲಾತಃ ಋಷಿಃ, ವಿಶ್ವೇದೇವಾ ದೇವತಾಃ, ಜಗತೀ ಛಂದಃ, ಮನುಷ್ಯಗಂಧನಿವಾರಣೇ ವಿನಿಯೋಗಃ ॥

**ಓಂ ಯೇಭ್ಯೋ ಮಾತಾ ಮಧುಮತ್ ಪಿನ್ವತೇ ಪಯಃ ಪೀಯೂಷಂ ದ್ಯೌರದಿತಿರದ್ರಿಬರ್ಹಾಃ । ಉಕ್ಥಶುಷ್ಮಾನ್ ವೃಷಭರಾನ್ತ್ಸ್ವಪ್ನಸಸ್ತಾ ಆದಿತ್ಯಾ ಅನು ಮದಾ ಸ್ವಸ್ತಯೇ ॥ ಋ.ಸಂ.10.63.3॥**

ಏವಾ ಇತ್ಯಸ್ಯ ವಾಮದೇವೋ ಗೌತಮ ಋಷಿಃ, ವಿಶ್ವೇದೇವಾ ದೇವತಾಃ, ಜಗತೀ ಛಂದಃ ಮನುಷ್ಯಗಂಧನಿವಾರಣೇ ವಿನಿಯೋಗಃ ।

**ಏವಾ ಪಿತ್ರೇ ವಿಶ್ವದೇವಾಯ ವೃಷ್ಣೇ ಯಜ್ಞೈರ್ವಿಧೇಮ ನಮಸಾ ಹವಿರ್ಭಿಃ । ಬೃಹಸ್ಪತೇ ಸುಪ್ರಜಾ ವೀರವಂತೋ ವಯಂ ಸ್ಯಾಮ ಪತಯೋ ರಯೀಣಾಮ್ ॥ ಋ.ಸಂ.4.50.6 ॥**

**ತತೋ ದೇವಮಾತ್ಮಾನಮಂತರಾ ಜವನಿಕಾಂ ಕೃತ್ವಾ ಬ್ರಹ್ಮಪಾರಸ್ತೋತ್ರಂ ಪಠನ್ ವೇದಿಕಾಮಾರುಹ್ಯ ಕೂರ್ಮಾಸನಾದಾವುಪವೇಶಯೇತ್ ।**

ದೇವರ ಮತ್ತು ತನ್ನ ಮಧ್ಯದಲ್ಲಿ ತೆರೆಯನ್ನು ಹಾಕಬೇಕು. ಬ್ರಹ್ಮಪಾರಸ್ತೋತ್ರವನ್ನು ಪಠಿಸುತ್ತಾ ವೇದಿಕೆಯನ್ನು ಏರಿ ಕೂರ್ಮ ಮುಂತಾದ ಆಸನಗಳಲ್ಲಿ ಕುಳಿತುಕೊಳ್ಳಬೇಕು.

**(ಬ್ರಹ್ಮಪಾರಸ್ತೋತ್ರಸ್ಯ ಕಂಡುಋಷಿಃ, ವಿಶ್ವೇದೇವಾ ದೇವತಾಃ, ತ್ರಿಷ್ಟುಪ್ ಛಂದಃ ಪೂಜಾಧಿಕಾರಸಿದ್ಧ್ಯರ್ಥೇ ಪಠನೇ ವಿನಿಯೋಗಃ ।)**

## ಬ್ರಹ್ಮಪಾರಸ್ತವಃ

**ಪ್ರಚೇತಸ ಊಚುಃ**

**ಬ್ರಹ್ಮಪಾರಂ ಮುನೇ ಶ್ರೋತುಮಿಚ್ಛಾಮಃ ಪರಮಂ ಸ್ತವಮ್ ।**
**ಜಪತಾ ಕಂಡುನಾ ದೇವೋ ಯೇನಾರಾಧ್ಯತ ಕೇಶವಃ ॥**

**ಸೋಮ ಉವಾಚ**

**ಪಾರಃ ಪರಂ ವಿಷ್ಣುರಪಾರಪಾರಃ**
**ಪರಃ ಪರಾಣಾಮಪಿ ಪಾರಪಾರಃ ।**
**ಸ ಬ್ರಹ್ಮಪಾರಃ ಪರಪಾರಭೂತಃ**
**ಪರಃ ಪರೇಭ್ಯಃ ಪರಮಾರ್ಥರೂಪೀ ॥**

**ಸ ಕಾರಣಂ ಕಾರಣತಸ್ತತೋಽಪಿ**
**ತಸ್ಯಾಪಿ ಹೇತುಃ ಪರಹೇತುಹೇತುಃ ।**
**ಕಾರ್ಯೇಷು ಚೈವಂ ಸ ಹಿ ಕರ್ಮಕರ್ತೃ**
**ರೂಪೈರಶೇಷೈರವತೀಹ ಸರ್ವಮ್ ॥**

**ಬ್ರಹ್ಮ ಪ್ರಭುರ್ಬ್ರಹ್ಮ ಸ ಸರ್ವಭೂತೋ**
**ಬ್ರಹ್ಮ ಪ್ರಜಾನಾಂ ಪತಿರಚ್ಯುತೋಽಸೌ ।**
**ಬ್ರಹ್ಮಾವ್ಯಯಂ ನಿತ್ಯಮಜಂ ಸ ವಿಷ್ಣು-**
**ರಪಕ್ಷಯಾದ್ಯೈರಖಿಲೈರಸಂಗೀ ॥**

**ಬ್ರಹ್ಮಾಕ್ಷರಮಜಂ ನಿತ್ಯಂ ಯಥಾಽಸೌ ಪುರುಷೋತ್ತಮಃ ।**
**ತಥಾ ರಾಗಾದಯೋ ದೋಷಾಃ ಪ್ರಯಾಂತು ಪ್ರಶಮಂ ಮಮ ॥**

**ಏವಂ ವೈ ಬ್ರಹ್ಮಪಾರಾಖ್ಯಂ ಸಂಸ್ತವಂ ಪರಮಂ ಜಪನ್ ।**
**ಅವಾಪ ಪರಮಾಂ ಸಿದ್ಧಿಂ ಸ ಸಮಾರಾಧ್ಯ ಕೇಶವಮ್ ॥**

## ಘಂಟಾವಾದನಮ್

**ಘಂಟಾಕಿರೀಟದಂಡೇಷು ಸ್ವರೇ ನಾಲೇ ಕ್ರಮೇಣ ತು ।**
**ಬ್ರಹ್ಮಾಣಂ ಗರುಡಂ ನಾಗಂ ವಾಗ್ದೇವೀಂ ಚ ಪ್ರಜಾಪತಿಮ್ ॥**

**ಇತ್ಯುಕ್ತದೇವಾನ್ ಆವಾಹ್ಯ, ನತ್ವಾ,** ಈ ಶ್ಲೋಕವನ್ನು ಪಠಿಸುತ್ತಾ ಘಂಟೆಯಲ್ಲಿ ಬ್ರಹ್ಮದೇವರನ್ನು, ಕಿರೀಟಭಾಗದಲ್ಲಿ ಗರುಡನನ್ನು, ದಂಡದಲ್ಲಿ ನಾಗನನ್ನು, ಸ್ವರದಲ್ಲಿ ಸರಸ್ವತಿಯನ್ನು, ನಾಲದಲ್ಲಿ ಪ್ರಜಾಪತಿಗಳನ್ನು ಆವಾಹನಮಾಡಿ ಘಂಟೆಯನ್ನು ನಮಸ್ಕರಿಸಬೇಕು.

**ಆಗಮಾರ್ಥಂ ತು ದೇವಾನಾಂ ಗಮನಾರ್ಥಂ ತು ರಕ್ಷಸಾಮ್ ।**
**ಕುರು ಘಂಟಾರವಂ ತತ್ರ ದೇವತಾಹ್ವಾನಲಾಂಛನಮ್ ॥**

**ಅಜ್ಞಾನಾತ್ ಜ್ಞಾನತೋ ವಾಽಪಿ ಕಾಂಸ್ಯಘಂಟಾಂ ನ ವಾದಯೇತ್ ।**
**ರಾಕ್ಷಸಾನಾಂ ಪಿಶಾಚಾನಾಂ ತದ್ದೇಶೇ ವಸತಿರ್ಭವೇತ್ ।**
**ತಸ್ಮಾತ್ಸರ್ವಪ್ರಯತ್ನೇನ ಘಂಟಾನಾದಂ ಚ ಕಾರಯೇತ್ ॥**

**ಇತಿ ಘಂಟಾಂ ವಾದಯೇತ್ ।**

ಈ ಮಂತ್ರಗಳನ್ನು ಪಠಿಸುತ್ತಾ ಘಂಟೆಯನ್ನು ಬಾರಿಸಬೇಕು.

**ತತೋ ಜವನಿಕಾಂ ತ್ಯಜೇತ್ ।**

ನಂತರ ದೇವರಿಗೂ ತನಗೂ ಮಧ್ಯದಲ್ಲಿ ಹಾಕಿದ ತೆರೆಯನ್ನು ತೆಗೆಯಬೇಕು.

## ಮಂಟಪಧ್ಯಾನಮ್

ಉತ್ತಪ್ತೋಜ್ಜ್ವಲಕಾಂಚನೇನ ರಚಿತಂ ತುಂಗಾಂಗರಂಗಸ್ಥಲಂ
ಶುದ್ಧಸ್ಫಾಟಿಕಭಿತ್ತಿಕಾವಿಲಸಿತೈಃ ಸ್ತಂಭೈಶ್ಚ ಹೈಮೈಃ ಶುಭೈಃ ।
ಮುಕ್ತಾಜಾಲವಿಲಂಬಿಮಂಟಪಯುತಂ ವಜ್ರೈಶ್ಚ ಸೋಪಾನಕೈಃ
ನಾನಾರತ್ನವಿರಾಜಿತೈಶ್ಚ ಕಲಶೈರತ್ಯಂತಶೋಭಾವಹಮ್ ॥

ದ್ವಾರೈಶ್ಚಾಮರರತ್ನಜಾತಖಚಿತೈಃ ಶೋಭಾವಹಂ ಮಂಡಿತಂ
ರತ್ನಾಗ್ರೈರಪಿ ಶಂಖಪದ್ಮಧವಲೈಃ ಪ್ರಭ್ರಾಜಿತಂ ಸ್ವಸ್ತಿಕೈಃ ।
ಮಾಣಿಕ್ಯೋಜ್ಜ್ವಲದೀಪದೀಪ್ತಿವಿಲಸಲ್ಲಕ್ಷ್ಮೀವಿಲಾಸಾಸ್ಪದಂ
ಧ್ಯಾಯೇನ್ಮಂಟಪಮರ್ಚನೇಷು ಸಕಲೇಷ್ವೇವಂವಿಧಂ ಸಾಧಕಃ ॥

ಈ ರೀತಿಯಾಗಿ ಮಂಟಪದ ಧ್ಯಾನ ಮಾಡಬೇಕು.

**ನಾರಾಯಣಾಯ ವಿದ್ಮಹೇ ವಾಸುದೇವಾಯ ಧೀಮಹಿ । ತನ್ನೋ ವಿಷ್ಣುಃ ಪ್ರಚೋದಯಾತ್ ।**

ಈ ಮಂತ್ರವನ್ನು ಪಠಿಸುತ್ತಾ ಸಂಪುಟವನ್ನು ತೆಗೆಯಬೇಕು.

**ಸಕ್ತುಮಿವೇತ್ಯಸ್ಯ ಬೃಹಸ್ಪತಿರಾಂಗಿರಸಃ ಋಷಿಃ, ಜ್ಞಾನಂ ದೇವತಾ, ತ್ರಿಷ್ಟುಪ್ ಛಂದಃ, ಪ್ರತಿಮಾಮುಖವಸ್ತ್ರವಿಸರ್ಜನೇ ವಿನಿಯೋಗಃ ।**

**ಸಕ್ತುಮಿವ ತಿತಉನಾ ಪುನಂತೋ ಯತ್ರ ಧೀರಾ ಮನಸಾ ವಾಚಮಕ್ರತ । ಅತ್ರಾ ಸಖಾಯಃ ಸಖ್ಯಾನಿ ಜಾನತೇ ಭದ್ರೈಷಾಂ ಲಕ್ಷ್ಮೀರ್ನಿಹಿತಾಧಿ ವಾಚಿ ॥ಋ.ಸಂ.10.71.02॥**

**ಇತಿ ದೇವಸ್ಯ ಮುಖವಸ್ತ್ರಂ ವಿಸೃಜ್ಯ ।**

ಈ ಮಂತ್ರದಿಂದ ದೇವರನ್ನು ಭುಜಂಗಿಸುವಾಗ ಮುಚ್ಚಿರುವ ವಸ್ತ್ರವನ್ನು ತೆಗೆದಿಡಬೇಕು.

**ಹಿರಣ್ಯವರ್ಣಾಮಿತ್ಯಸ್ಯ ಆನಂದಕರ್ದಮಶ್ರೀದಚಿಕ್ಲೀತಾಃ ಋಷಯಃ, ಶ್ರೀಃ ದೇವತಾ, ಅನುಷ್ಟುಪ್ ಛಂದಃ, ಪ್ರತಿಮಾನಿರೀಕ್ಷಣೇ ವಿನಿಯೋಗಃ ।**

**ಓಂ ಹಿರಣ್ಯವರ್ಣಾಂ ಹರಿಣೀಂ ಸುವರ್ಣರಜತಸ್ರಜಾಮ್ । ಚಂದ್ರಾಂ ಹಿರಣ್ಮಯೀಂ ಲಕ್ಷ್ಮೀಂ ಜಾತವೇದೋ ಮ ಆ ವಹ ॥ಋ.ಖಿಲ॥**

**ಇತಿ ಪ್ರತಿಮಾಂ ನಿರೀಕ್ಷ್ಯ,**

ಈ ಮಂತ್ರವನ್ನು ಪಠಿಸುತ್ತಾ ಪ್ರತಿಮೆಯನ್ನು ಭಕ್ತಿಯಿಂದ ನೋಡಬೇಕು.

**ತತಃ ಕೃತಾಂಜಲಿರ್ಭೂತ್ವಾ ಪ್ರಾರ್ಥಯೇಚ್ಚ ಜನಾರ್ದನಮ್ ।**

ನಂತರ ಅಂಜಲಿಯನ್ನು ಜೋಡಿಸಿ ಪರಮಾತ್ಮನನ್ನು ಈ ರೀತಿಯಾಗಿ ಪ್ರಾರ್ಥಿಸಬೇಕು.

**ಕೃಪಯೋತ್ತಿಷ್ಠ್ಯತಾಂ ತಲ್ಪಾತ್ ತವ ಪೂಜಾಕ್ರಿಯಾ ಯತಃ ।**
**ಆಯತಾಭ್ಯಾಂ ವಿಶಾಲಾಭ್ಯಾಂ ಶೀತಲಾಭ್ಯಾಂ ಕೃಪಾನಿಧೇ ।**
**ಕರುಣಾರಸಪೂರ್ಣಾಭ್ಯಾಂ ಲೋಚನಾಭ್ಯಾಂ ವಿಲೋಕಯ ॥**

**ಇತಿ ದೇವಂ ಪ್ರಾರ್ಥ್ಯ ದೇವಮುತ್ಥಾಪ್ಯ ಪೀಠೇ ಉಪವೇಶಯೇತ್ ॥**

ಈ ರೀತಿಯಾಗಿ ದೇವರನ್ನು ಪ್ರಾರ್ಥಿಸಿ, ದೇವರ ಪ್ರತಿಮೆಯನ್ನು ಪೀಠದಲ್ಲಿ ಇರಿಸಬೇಕು.

## ನಿರ್ಮಾಲ್ಯವಿಸರ್ಜನಮ್

**ತತಃ ನಿರ್ಮಾಲ್ಯಂ ವಿಸೃಜೇತ್ ।**

ಅರುಣೋದಯಕಾಲಕ್ಕಿಂತಲೂ ಮುಂಚೆಯೇ ನಿರ್ಮಾಲ್ಯವನ್ನು ತೆಗೆಯಬೇಕು. ಅಂಗುಷ್ಠ-ತರ್ಜನೀ(ತೋರುಬೆರಳು) ಬೆರಳುಗಳ ಅಗ್ರಭಾಗದಿಂದ ನಿರ್ಮಾಲ್ಯವನ್ನು ತೆಗೆಯಬೇಕು.

ರುದ್ರದೇವರು ದೇವರ ಎಡಭಾಗದಲ್ಲಿ ತಮ್ಮ ತಲೆಯ ಮೇಲೆ ಪಾತ್ರೆಯನ್ನು ಧರಿಸಿ ನಿಂತಿರುತ್ತಾರೆ ಎಂದು ಅನುಸಂಧಾನ ಮಾಡಿಕೊಳ್ಳಬೇಕು. ಎಡಭಾಗದಲ್ಲಿಯ ಆ ಪಾತ್ರೆಯಲ್ಲಿ ನಿರ್ಮಾಲ್ಯವನ್ನು ವಿಸರ್ಜಿಸಬೇಕು.

ನಿರ್ಮಾಲ್ಯವಿಸರ್ಜನೆ ಮಾಡುವಾಗ **ಅಹಂ ರುದ್ರೇಭಿಃ...** ಎಂಬ ಸೂಕ್ತವನ್ನು ಪಠಿಸಬೇಕು. ನಿರ್ಮಾಲ್ಯಾಭಿಷೇಕದಲ್ಲಿ ಪುರುಷಸೂಕ್ತವನ್ನು ಪಠಿಸಬೇಕು. ಮೊದಲು ಅಭಿಷೇಕ ಮಾಡಿದ ನಿರ್ಮಾಲ್ಯಜಲವನ್ನು ತೆಗೆದು ಹಾಕಬೇಕು. ನಂತರದ ನಿರ್ಮಾಲ್ಯಜಲವನ್ನು ಲಕ್ಷ್ಮ್ಯಾದಿಗಳಿಗೆ ಕೊಡಲು, ಬ್ರಹ್ಮಯಜ್ಞಾಂಗ ತರ್ಪಣಕ್ಕಾಗಿ, ಎರಡು ಭಾಗ ಮಾಡಿ ಪ್ರತ್ಯೇಕವಾಗಿ ಇಟ್ಟುಕೊಳ್ಳಬೇಕು.

ನಂತರ ಲಕ್ಷ್ಮೀ-ವಾಯು-ಶೇಷ-ಗರುಡರ ಪ್ರತಿಮೆಯಲ್ಲಿರುವ ನಿರ್ಮಾಲ್ಯವನ್ನು ತೆಗೆದು ಅವುಗಳಿಗೆ ಅಭಿಷೇಕ ಮಾಡಬೇಕು.

## ರಮಾಭಿಷೇಕಃ

ಅಂಭೃಣೀಸೂಕ್ತ-ಶ್ರೀಸೂಕ್ತಗಳಿಂದ ಲಕ್ಷ್ಮೀದೇವಿಯ ಅಭಿಷೇಕವನ್ನು ಮಾಡಬೇಕು. ಗೋಲಕದ್ವಯವನ್ನು ರಮಾದೇವಿಯ ಪ್ರತಿಮೆಯಲ್ಲಿ ಈ ರೀತಿಯಾಗಿ ಚಿಂತಿಸಬೇಕು. ಪರಿದೃಶ್ಯಮಾನವಾದ ರಮಾಪ್ರತಿಮೆಯಲ್ಲಿ ಮುಖ್ಯಪ್ರಾಣದೇವರು ಮೊದಲ ಗೋಲಕ ಎಂದು ತಿಳಿಯಬೆಕು. ಆ ವಾಯುವಿನಲ್ಲಿ ಲಕ್ಷ್ಮೀದೇವಿಯು ದ್ವಿತೀಯ ಗೋಲಕ ಎಂಬುದಾಗಿ ತಿಳಿಯಬೇಕು. ಅಲ್ಲಿ ವಿಷ್ಣುವಿನ ಪೂಜೆಯನ್ನು ಮಾಡಬೇಕು.

**ಮುಖ್ಯಪ್ರಾಣಧ್ಯಾನಮ್**

**ಉದ್ಯದ್ರವಿಪ್ರಕರಸನ್ನಿಭಮಚ್ಯುತಾಂಕೇ**
**ಸ್ವಾಸೀನಮಸ್ಯ ನುತಿನಿತ್ಯವಚಃಪ್ರವೃತ್ತಿಮ್ ।**
**ಧ್ಯಾಯೇದ್ಗದಾಭಯಕರಂ ಸುಕೃತಾಂಜಲಿಂ ತಂ**
**ಪ್ರಾಣಂ ಯಥೇಷ್ಟತನುಮುನ್ನತಕರ್ಮಶಕ್ತಿಮ್ ॥**

**ಇತಿ ಲಕ್ಷ್ಮೀಪ್ರತಿಮಾಯಾಂ ಪ್ರಥಮಂ ಮುಖ್ಯಪ್ರಾಣಂ ಧ್ಯಾತ್ವಾ, ಆವಾಹ್ಯ ॥**

ಈ ಶ್ಲೋಕವನ್ನು ಪಠಿಸುತ್ತಾ ಲಕ್ಷ್ಮೀದೇವಿಯ ಪ್ರತಿಮೆಯಲ್ಲಿ ಮೊದಲಿಗೆ ಮುಖ್ಯಪ್ರಾಣದೇವರನ್ನು ಧ್ಯಾನ ಮಾಡಿ ಆವಾಹನ ಮಾಡಬೇಕು.

**ಲಕ್ಷ್ಮೀಧ್ಯಾನಮ್**

**ಕೌಶೇಯಪೀತವಸನಾಮರವಿಂದನೇತ್ರಾಂ**
**ಪದ್ಮದ್ವಯಾಭಯವರೋದ್ಯತಪದ್ಮಹಸ್ತಾಮ್ ।**

**ಉದ್ಯಚ್ಛತಾರ್ಕಸದೃಶೀಂ ಪರಮಾಂಕಸಂಸ್ಥಾಂ**
**ಧ್ಯಾಯೇದ್ವಿಧೀಶನುತಪಾದಯುಗಾಂ ಜನಿತ್ರೀಮ್ ॥**

**ಇತಿ ಧ್ಯಾತ್ವಾ ಮುಖ್ಯಪ್ರಾಣಸ್ಯ ಅಂತಃ ಲಕ್ಷ್ಮೀಂ ಆವಾಹ್ಯ ॥**

ಮುಖ್ಯಪ್ರಾಣದೇವರ ಅಂತರ್ಗತವಾಗಿ ಲಕ್ಷ್ಮೀದೇವಿಯನ್ನು ಆವಾಹನ ಮಾಡಬೇಕು.

**ನಾರಾಯಣಧ್ಯಾನಮ್**

**ಉದ್ಯದ್ಭಾಸ್ವತ್ಸಮಾಭಾಸಃ ಚಿದಾನಂದೈಕದೇಹವಾನ್ ।**
**ಶಂಖಚಕ್ರಗದಾಪದ್ಮಧರೋ ಧ್ಯೇಯೋಹಮೀಶ್ವರಃ ॥**

**ಇತಿ ಲಕ್ಷ್ಮ್ಯಂತಃಸ್ಥಂ ನಾರಾಯಣಂ ಧ್ಯಾತ್ವಾ**

ಈ ರೀತಿಯಾಗಿ ಲಕ್ಷ್ಮೀಯನ್ನು ಚಿಂತಿಸಿ ಲಕ್ಷ್ಮ್ಯಂತರ್ಯಾಮಿಯಾಗಿ ನಾರಾಯಣನನ್ನು ಚಿಂತಿಸಬೇಕು.

**''ಏಹ್ಯೇಹಿ ಮಮ ಹೃತ್ಪದ್ಮಸ್ಥಿತ ನಾರಾಯಣ ! ಲಕ್ಷ್ಮೀಪ್ರತಿಮಾಂತಃಸ್ಥ ತೇಜಃಸಾರಪ್ರತಿಮಾಂತಃಸ್ಥ ಮುಖ್ಯಪ್ರಾಣಪ್ರತಿಮಾಗತಲಕ್ಷ್ಮೀಪ್ರತಿಮಾಯಾಂ ಲಕ್ಷ್ಮ್ಯಂತರ್ಗತಂ ತನ್ನಾಮಕಂ, ತನ್ನಿಯಾಮಕಂ, ತದಾಕಾರಂ, ತದಾಶ್ರಯಂ, ತದಾಧಾರಂ, ತದುತ್ಪಾದಕಂ, ತತ್ಪಾಲಕಂ, ತತ್ಸಂಹಾರಕಂ, ತತ್ಪ್ರೇರಕಂ, ತನ್ನಿವರ್ತಕಂ, ತತ್ಸತ್ತಾಪ್ರದಂ, ತಚ್ಛಬ್ದಪ್ರವೃತ್ತಿನಿಮಿತ್ತಂ, ಸರ್ವಗುಣೈಃ ಸ್ವಾತಂತ್ರ್ಯೇಣ ನಿರವಧಿಕತಯಾ ಚ ಪರಿಪೂರ್ಣತಮಂ, ತದೀಯದೋಷಾತಿದೂರಂ, ತದತ್ಯಂತವಿಲಕ್ಷಣಂ, ತದಚಿಂತ್ಯಂ, ತದುತ್ತಮಂ, ನಾರಾಯಣಂ ತ್ವಾಂ ಆವಾಹಯಾಮಿ ಆವಾಹಯಾಮಿ' ಇತ್ಯಾವಾಹಯೇತ್ ॥**

ಈ ರೀತಿಯಾಗಿ ಪಠಿಸುತ್ತಾ ನಾರಾಯಣನನ್ನು ಆ ಲಕ್ಷ್ಮೀಪ್ರತಿಮೆಯಲ್ಲಿ ಆವಾಹನ ಮಾಡಬೇಕು. ನಂತರ ಶ್ರೀಸುಕ್ತಾದಿಗಳನ್ನು ಪಠಿಸುತ್ತಾ ಲಕ್ಷ್ಮೀದೇವಿಯ ಅಭಿಷೇಕಾದಿಗಳನ್ನು ಮಾಡಬೇಕು.

# ಮುಖ್ಯಪ್ರಾಣಾಭಿಷೇಕಃ

ನಂತರ ವಾಯುದೇವರ ಪ್ರತಿಮೆಯಲ್ಲಿಯೂ ಇದೇ ರೀತಿಯಾಗಿ ಗೋಲಕ ದ್ವಯವನ್ನು ಚಿಂತಿಸಬೇಕು. ಪರಿದೃಶ್ಯಮಾನವಾದ ಮುಖ್ಯಪ್ರಾಣಪ್ರತಿಮೆಯಲ್ಲಿ ಮುಖ್ಯಪ್ರಾಣದೇವರು ಮೊದಲ ಗೋಲಕ ಎಂದು ತಿಳಿಯಬೇಕು. ಆ ವಾಯುವಿನಲ್ಲಿ ಲಕ್ಷ್ಮೀದೇವಿಯು ದ್ವಿತೀಯ ಗೋಲಕ ಎಂಬುದಾಗಿ ತಿಳಿಯಬೇಕು. ಅಲ್ಲಿ ವಿಷ್ಣುವಿನ ಪೂಜೆಯನ್ನು ಮಾಡಬೇಕು.

**ಮುಖ್ಯಪ್ರಾಣಧ್ಯಾನಮ್**

**ಉದ್ಯದ್ರವಿಪ್ರಕರಸನ್ನಿಭಮಚ್ಯುತಾಂಕೇ**
**ಸ್ವಾಸೀನಮಸ್ಯ ನುತಿನಿತ್ಯವಚಃಪ್ರವೃತ್ತಿಮ್ ।**
**ಧ್ಯಾಯೇದ್ಗದಾಭಯಕರಂ ಸುಕೃತಾಂಜಲಿಂ ತಂ**
**ಪ್ರಾಣಂ ಯಥೇಷ್ಟತನುಮುನ್ನತಕರ್ಮಶಕ್ತಿಮ್ ॥**

**ಇತಿ ಮುಖ್ಯಪ್ರಾಣಪ್ರತಿಮಾಯಾಂ ಪ್ರಥಮಂ ಮುಖ್ಯಪ್ರಾಣಂ ಧ್ಯಾತ್ವಾ, ಆವಾಹ್ಯ ॥**

ಈ ಶ್ಲೋಕವನ್ನು ಪಠಿಸುತ್ತಾ ಮುಖ್ಯಪ್ರಾಣದೇವರ ಪ್ರತಿಮೆಯಲ್ಲಿ ಮೊದಲಿಗೆ ಮುಖ್ಯಪ್ರಾಣದೇವರನ್ನು ಧ್ಯಾನ ಮಾಡಿ ಆವಾಹನ ಮಾಡಬೇಕು.

**ಲಕ್ಷ್ಮೀಧ್ಯಾನಮ್**

**ಕೌಶೇಯಪೀತವಸನಾಮರವಿಂದನೇತ್ರಾಂ**
**ಪದ್ಮದ್ವಯಾಭಯವರೋದ್ಯತಪದ್ಮಹಸ್ತಾಮ್ ।**
**ಉದ್ಯಚ್ಛತಾರ್ಕಸದೃಶೀಂ ಪರಮಾಂಕಸಂಸ್ಥಾಂ**
**ಧ್ಯಾಯೇದ್ವಿಧೀಶನುತಪಾದಯುಗಾಂ ಜನಿತ್ರೀಮ್ ॥**

**ಇತಿ ಧ್ಯಾತ್ವಾ ಮುಖ್ಯಪ್ರಾಣಸ್ಯ ಅಂತಃ ಲಕ್ಷ್ಮೀಂ ಆವಾಹ್ಯ ॥**

ಈ ರೀತಿಯಾದಿ ಲಕ್ಷ್ಮೀದೇವಿಯನ್ನು ಧ್ಯಾನ ಮಾಡಿ ಮುಖ್ಯಪ್ರಾಣದೇವರ ಅಂತರ್ಗತವಾಗಿ ಲಕ್ಷ್ಮೀದೇವಿಯನ್ನು ಆವಾಹನ ಮಾಡಬೇಕು.

ನಾರಾಯಣಧ್ಯಾನಮ್

ಉದ್ಯದ್ಭಾಸ್ವತ್ಸಮಾಭಾಸಃ ಚಿದಾನಂದೈಕದೇಹವಾನ್ ।
ಶಂಖಚಕ್ರಗದಾಪದ್ಮಧರೋ ಧ್ಯೇಯೋಽಹಮೀಶ್ವರಃ ॥

ಇತಿ ಧ್ಯಾತ್ವಾ ಲಕ್ಷ್ಮ್ಯಂತಃಸ್ಥಂ ನಾರಾಯಣಮ್

ಈ ರೀತಿಯಾಗಿ ದೇವರ ಧ್ಯಾನ ಮಾಡಿ ಲಕ್ಷ್ಮ್ಯಂತರ್ಯಾಮಿಯಾಗಿ ನಾರಾಯಣನನ್ನು ಚಿಂತಿಸಬೇಕು.

''ಏಹ್ಯೇಹಿ ಮಮ ಹೃತ್ಪದ್ಮಸ್ಥಿತ ನಾರಾಯಣ ! ವಾಯುಪ್ರತಿಮಾಂತಃಸ್ಥ ತೇಜಃಸಾರಪ್ರತಿಮಾಂತಃಸ್ಥ ಮುಖ್ಯಪ್ರಾಣರೂಪಪ್ರತಿಮಾಗತಲಕ್ಷ್ಮೀರೂಪ-ಚಿನ್ಮಯಪ್ರತಿಮಾಯಾಂ ವಾಯ್ವಂತರ್ಗತಂ ತನ್ನಾಮಕಂ, ತನ್ನಿಯಾಮಕಂ, ತದಾಕಾರಂ, ತದಾಶ್ರಯಂ, ತದಾಧಾರಂ, ತದುತ್ಪಾದಕಂ, ತತ್ಪಾಲಕಂ, ತತ್ಸಂಹಾರಕಂ, ತತ್ಪ್ರೇರಕಂ, ತನ್ನಿವರ್ತಕಂ, ತತ್ಸತ್ತಾಪ್ರದಂ, ತಚ್ಛಬ್ದಪ್ರವೃತ್ತಿನಿಮಿತ್ತಂ, ಸರ್ವಗುಣೈಃ ಸ್ವಾತಂತ್ರ್ಯೇಣ ನಿರವಧಿಕತಯಾ ಚ ಪರಿಪೂರ್ಣತಮಂ, ತದೀಯದೋಷಾತಿ-ದೂರಂ, ತದತ್ಯಂತವಿಲಕ್ಷಣಂ, ತದಚಿಂತ್ಯಂ, ತದುತ್ತಮಂ, ನಾರಾಯಣಂ ತ್ವಾಂ ಆವಾಹಯಾಮಿ ಆವಾಹಯಾಮಿ' ಇತ್ಯಾವಾಹಯೇತ್ ॥

ಈ ರೀತಿಯಾಗಿ ಚಿಂತಿಸಿ ಬಳಿತ್ಥಾಸೂಕ್ತ-ಪವಮಾನ-ಸುಂದರಕಾಂಡ-ವಾಯುಸ್ತುತಿ-ಮಧ್ವವಿಜಯ ಇತ್ಯಾದಿಗಳಿಂದ ವಾಯುದೇವರ ಅಭಿಷೇಕವನ್ನು ಮಾಡಬೇಕು.

## ಗರುಡ-ಶೇಷಾಭಿಷೇಕಃ

ಅಥ ಗರುಡಾದಿಪ್ರತಿಮಾಸ್ವಪಿ ತತ್ತನ್ಮಂತ್ರೈಃ ತತ್ತದ್ದೇವತಾಂ ಧ್ಯಾತ್ವಾ ತದಂತ-ರ್ಗತವಾಯುಂ ತದಂತರ್ಗತಲಕ್ಷ್ಮೀಂ ತದಂತರ್ಗತನಾರಾಯಣಂ ಚ ಧ್ಯಾತ್ವಾ

ದಧಾನಃ ಕುಂಭಮಭಯಂ ಪೀತಶುಕ್ಲಾರುಣೋ ಹರಿಃ ।
ಕೃಷ್ಣಶ್ಚಾಜಾನುತೋ ನಾಭೇಃ ಕಂಠಾತ್ ಕಾದಂತ ಏವ ಚ ॥

ಪ್ರಿಯಾಯುಕ್ ಪುರತೋ ವಿಷ್ಣೋಃ ಪಕ್ಷತುಂಡಸಮನ್ವಿತಃ ।
ಜಂಗಮಸ್ಥಾವರವಿಷಹೃದಯಂ ಸರ್ವಕಾಮದಃ ॥

ಈ ಮಂತ್ರದಿಂದ ಗರುಡನ ಧ್ಯಾನವನ್ನು ಮಾಡಿ, ತದಂತರ್ಗತರಾದ ಮುಖ್ಯಪ್ರಾಣರನ್ನು, ಮುಖ್ಯಪ್ರಾಣಾಂತರ್ಗತ ಲಕ್ಷ್ಮೀದೇವಿಯನ್ನು ಧ್ಯಾನ ಮಾಡಿ ಇವರನ್ನು ಆವಾಹನ ಮಾಡಬೇಕು. ನಂತರ ಲಕ್ಷ್ಮ್ಯಂತರ್ಗತ ನಾರಾಯಣನನ್ನು ಧ್ಯಾನಮಾಡಬೇಕು. ನಂತರ,

**'ಏಹ್ಯೇಹಿ ಮಮ ಹೃತ್ಪದ್ಮಸ್ಥಿತ ನಾರಾಯಣ ! ಏತತ್ಪ್ರತಿಮಾಂತಃಸ್ಥ ತೇಜಃ-ಸಾರಪ್ರತಿಮಾಂತಃಸ್ಥ ಗರುಡಪ್ರತಿಮಾಯಾಂ ಗರುಡಾಂತರ್ಗತಮುಖ್ಯಪ್ರಾಣ-ರೂಪಚಿನ್ಮಯಪ್ರತಿಮಾಗತಲಕ್ಷ್ಮೀರೂಪ ಚಿನ್ಮಯಪ್ರತಿಮಾಯಾಂ ಗರುಡಾಂತರ್ಗತಂ ತನ್ನಾಮಕಂ... ... ... . ನಾರಾಯಣಂ ತ್ವಾಂ ಅವಾಹಯಾಮಿ ಆವಾಹಯಾಮಿ ಇತ್ಯಾವಾಹಯೇತ್ ॥**

**ಪಕ್ಷಿರಾಜಾಯ ವಿದ್ಮಹೇ ವಕ್ರತುಂಡಾಯ ಧೀಮಹಿ ।**
**ತನ್ನೋ ಗರುಡಃ ಪ್ರಚೋದಯಾತ್॥**

ಈ ಮಂತ್ರದಿಂದ ಗರುಡನ ಅಭಿಷೇಕವನ್ನು ಮಾಡಬೇಕು.

ನಂತರ ಶೇಷನ ಧ್ಯಾನವನ್ನು ಮಾಡಿ ಅಲ್ಲಿ ಮುಖ್ಯಪ್ರಾಣಾದಿಗಳನ್ನು ಚಿಂತಿಸಿ, ನಾರಾಯಣನನ್ನು ಚಿಂತಿಸಿ ಪೂಜಿಸಬೇಕು.

**ದಧಾನೋ ಹಲಸೌನಂದೌ ಶ್ವೇತವರ್ಣಃ ಕೃತಾಂಜಲಿಃ ।**
**ಸಹಸ್ರಮೂರ್ಧಾಽದ್ವಿತೀಯಕರ್ಣಭೂಷಃ ಪ್ರಿಯಾಯುತಃ ।**
**ವನಮಾಲೀ ನೀಲವಾಸಾ ಧ್ಯೇಯೋ ವಿಷ್ಣೋಸ್ತು ಪೃಷ್ಠತಃ ॥**

**(ಓಂ ಶೇಂ) ಶೇಷಾಯ ನಮಃ ॥ ಇತಿ ಶೇಷಂ ಚ ಅಭಿಷಿಂಚೇತ್ ।**

ಈ ಮಂತ್ರವನ್ನು ಪಠಿಸುತ್ತಾ ಶೇಷದೇವರ ಅಭಿಷೇಕ ಮಾಡಬೇಕು.

**ಸೂಚನೆ-** ಮುಖ್ಯಪ್ರಾಣದೇವರ ಪ್ರತಿಮೆಗಳಿಗೂ ಎರಡು ಬಾರಿ ಅಭಿಷೇಕ ಮಾಡಬೇಕು. ಮೊದಲ ಸಲ ಮಾಡಿದ ನಿರ್ಮಾಲ್ಯಜಲವನ್ನು ವಿಸರ್ಜನ ಮಾಡಬೇಕು. ಎರಡನೆಯ ಬಾರಿ ಮಾಡಿದ ತೀರ್ಥವನ್ನು ಪ್ರತ್ಯೇಕವಾಗಿ ತೆಗೆದಿಡಬೇಕು. ದೇವರ ತೀರ್ಥವನ್ನು ಸ್ವೀಕರಿಸಿದ ನಂತರ ಪ್ರಾಣದೇವರ ತೀರ್ಥವನ್ನು ಸ್ವೀಕರಿಸಬೇಕು. ಗರುಡ-ಶೇಷಾದಿಗಳ ತೀರ್ಥವನ್ನು ವಿಸರ್ಜಿಸಬೇಕು. ಗರುಡ-ಶೇಷಾದಿಗಳ ತೀರ್ಥವನ್ನು ಸ್ವೀಕರಿಸಬಾರದು.

## ಭೂತೋಚ್ಚಾಟನಮ್

ಅಪಸರ್ಪಂತ್ವಿತ್ಯಸ್ಯ ವಾಮದೇವ ಋಷಿಃ, ಭೂತಾನಿ ದೇವತಾಃ, ಅನುಷ್ಟುಪ್ ಛಂದಃ, ಭೂತೋಚ್ಚಾಟನೇ ವಿನಿಯೋಗಃ ।

**ಅಪಸರ್ಪಂತು ಯೇ ಭೂತಾ ಯೇ ಭೂತಾ ಭುವಿ ಸಂಸ್ಥಿತಾಃ ।**
**ಯೇ ಭೂತಾ ವಿಘ್ನಕರ್ತಾರಃ ತೇ ನಶ್ಯಂತು ಶಿವಾಜ್ಞಯಾ ॥**

**ಅಪಕ್ರಾಮಂತು ಭೂತಾನಿ ಪಿಶಾಚಾಃ ಸರ್ವತೋ ದಿಶಮ್ ।**
**ಅಪಸರ್ಪಂತು ಯೇ ಭೂತಾಃ ಕ್ರೂರಾಶ್ಚೈವ ತು ರಾಕ್ಷಸಾಃ ॥**

**ಯೇ ಚಾನ್ಯೇ ನಿವಸಂತ್ಯೇವ ದೇವತಾ ಭುವಿ ಸಂಸ್ಥಿತಾಃ ।**
**ತೇಷಾಮಪ್ಯವಿರೋಧೇನ ಬ್ರಹ್ಮಕರ್ಮ ಸಮಾರಭೇ ॥**

ಛೋಟಿಕಾಮುದ್ರೆಯಿಂದ (ಬಲಗೈಯ ಅಂಗುಷ್ಠ ಮತ್ತು ಮಧ್ಯದ ಬೆರಳುಗಳಿಂದ ಶಬ್ದವನ್ನು ಮಾಡುವುದು) ಭೂತಗಳ ಪರಿಹಾರವನ್ನು ಮಾಡಿಕೊಳ್ಳಬೇಕು.

## ಆಸನಮ್

ಪೃಥ್ವೀತಿ ಮಂತ್ರಸ್ಯ ಮೇರುಪೃಷ್ಠ ಋಷಿಃ, ಕೂರ್ಮೋ ದೇವತಾ, ಸುತಲಂ ಛಂದಃ, ಪ್ರಾರ್ಥನಾಪೂರ್ವಕಮುಪವೇಶನೇ ವಿನಿಯೋಗಃ ॥

**ಪೃಥ್ವಿ ತ್ವಯಾ ಧೃತಾ ಲೋಕಾ ದೇವಿ ತ್ವಂ ವಿಷ್ಣುನಾ ಧೃತಾ ।**
**ತ್ವಂ ಚ ಧಾರಯ ಮಾಂ ದೇವಿ ಪವಿತ್ರಂ ಕುರು ಚಾಸನಮ್ ।**
**ಮಾಂ ಚ ಪೂತಂ ಕುರು ಧರೇ ನತೋಽಸ್ಮಿ ತ್ವಾಂ ಸುರೇಶ್ವರಿ ॥**

ಈ ಶ್ಲೋಕವನ್ನು ಹೇಳುತ್ತಾ ಭೂಮಿಯನ್ನು ಪ್ರಾರ್ಥಿಸಿ ಕುಶ ಅದರ ಮೇಲೆ ಕೃಷ್ಣಾಜಿನ ಅದರ ಮೇಲೆ ವಸ್ತ್ರ ಹಾಕಿದ ಆಸನದಲ್ಲಿ ಕುಳಿತುಕೊಳ್ಳಬೇಕು.

**ನಿರಸ್ತಃ ಪರಾವಸುಃ ।** ಈ ಮಂತ್ರವನ್ನು ಪಠಿಸುತ್ತಾ ಆಸನದಲ್ಲಿಯ ಕುಶವನ್ನು ಅಥವಾ ನೂಲಿನ ಎಳೆಯನ್ನು ತೆಗೆದು ಪಶ್ಚಿಮ-ದಕ್ಷಿಣ(ನೈಋತ್ಯ)ದಿಕ್ಕಿಗೆ ಎಸೆಯಬೇಕು.

**ಇದಮಹಮರ್ವಾವಸೋಃ ಸದನೇ ಸೀದಾಮಿ ತದ್ದತ್ತ ಏವಾಸನೇ ಸೋಮಮಂಡಲೇ ಕೂರ್ಮಸ್ಕಂಧೇ ಉಪವಿಷ್ಟೋಽಸ್ಮಿ ಇತಿ ಸಂಚಿಂತ್ಯ,**

ಅರ್ವಾವಸುವು ನೀಡಿದ ಆಸನದಲ್ಲಿ ಸೋಮಮಂಡಲದಲ್ಲಿ, ಕೂರ್ಮಸ್ಕಂಧದಲ್ಲಿ ಕುಳಿತಿದ್ದೇನೆಂದು ಚಿಂತಿಸಬೇಕು.

**ಭೂರ್ಭುವಸ್ಸ್ವರೋಮ್ ಇತಿ ವ್ಯಾಹೃತ್ಯ, ಆಸನಂ ಉಪಸ್ಪೃಶ್ಯ,**

ಭೂರ್ಭುವಸ್ಸ್ವರೋಮ್ ಎಂದು ಉಚ್ಚರಿಸಬೇಕು. ಆಸನವನ್ನು ಮುಟ್ಟಬೇಕು.

**1) ಓಂ ಪಂ ಪರಮಪುರುಷಾಯ ನಮಃ 2) ಓಂ ಆಧಾರಶಕ್ತ್ಯೈ ನಮಃ**
**3) ಓಂ ಕುಂ ಕೂರ್ಮಾಯ ನಮಃ 4) ಓಂ ಮಂ ಮಂಡೂಕಾಯ ನಮಃ**
**5) ಓಂ ವಂ ವರಾಹಾಯ ನಮಃ 6) ಓಂ ಶೇಂ ಶೇಷಾಯ ನಮಃ**
**7) ಓಂ ಕಂ ಕಾಲಾಗ್ನಿರುದ್ರಾಯ ನಮಃ 8) ಓಂ ವಂ ವಜ್ರಾಯ ನಮಃ**

ಆಸನವನ್ನು ಮುಟ್ಟುತ್ತಾ ಈ ಮಂತ್ರಗಳನ್ನು ಪಠಿಸಬೇಕು.

**''ಅಸ್ತ್ರಾಯ ಫಟ್'' ಇತಿ ಇಷುಮುದ್ರಯಾ ದಿಗ್ಬಂಧನಂ ಕುರ್ಯಾತ್ ।**

ಎಂದು ಹೇಳುತ್ತಾ ಬಾಣಮುದ್ರೆಯಿಂದ ದಿಗ್ಬಂಧನ ಮಾಡಬೇಕು.

**''ಐಂದ್ರ್ಯಾದಿದಿಕ್ಷು ಬಧ್ನಾಮಿ ನಮಶ್ಚಕ್ರಾಯ ಸ್ವಾಹಾ'' ಇತಿ ಸುದರ್ಶನಮುದ್ರಾಂ ಸರ್ವದಿಕ್ಷು ಸ್ವಶಿರಸಿ ದರ್ಶಯೇತ್ ॥**

ಈ ಮಂತ್ರವನ್ನು ಪಠಿಸುತ್ತಾ ಎಲ್ಲ ದಿಕ್ಕುಗಳಲ್ಲಿ ಮತ್ತು ತನ್ನ ತಲೆಯ ಮೇಲೆ ಸುದರ್ಶನಚಕ್ರಮುದ್ರೆಯನ್ನು ತೋರಿಸಬೇಕು.

## ಪೂಜಾಸಂಕಲ್ಪಃ

**ಆಚಮ್ಯ, ಪ್ರಾಣಾನಾಯಮ್ಯ,**

**ಶ್ರೀಗೋವಿಂದ ಗೋವಿಂದ ಶ್ರೀವಿಷ್ಣೋ ವಿಷ್ಣೋ ಶ್ರೀಮದ್ಭಗವತೋ ಮಹಾಪುರುಷಸ್ಯ ವಿಷ್ಣೋರಾಜ್ಞಯಾ ಪ್ರವರ್ತಮಾನಸ್ಯ ಆದ್ಯಬ್ರಹ್ಮಣಃ ದ್ವಿತೀಯಪರಾರ್ಧೇ, ಶ್ರೀಶ್ವೇತವರಾಹಕಲ್ಪೇ, ವೈವಸ್ವತಮನ್ವಂತರೇ, ಕಲಿಯುಗೇ, ಪ್ರಥಮಚರಣೇ, ಭರತವರ್ಷೇ, ಭರತಖಂಡೇ, ಜಂಬೂದ್ವೀಪೇ, ದಂಡಕಾರಣ್ಯೇ,**

ದೇಶೇ ಗೋದಾವರ್ಯಾಃ ದಕ್ಷಿಣೇ ತೀರೇ, ಶಾಲಿವಾಹನಶಕೇ, ಬೌದ್ಧಾವತಾರೇ, ರಾಮಕ್ಷೇತ್ರೇ, ಅಸ್ಮಿನ್ ವರ್ತಮಾನೇ, ಚಾಂದ್ರಮಾನೇನ... ಸಂವತ್ಸರೇ... ಅಯನೇ... ಋತೌ... ಮಾಸೇ... ಪಕ್ಷೇ... ತಿಥೌ... ವಾಸರೇ... ಶುಭನಕ್ಷತ್ರೇ... ಶುಭಯೋಗೇ... ಶುಭಕರಣೇ... ಏವಂಗುಣ ವಿಶೇಷಣವಿಶಿಷ್ಟಾಯಾಂ ಶುಭತಿಥೌ ಶ್ರೀಮುಖ್ಯಪ್ರಾಣಾಂತರ್ಗತ ಶ್ರೀವಿಷ್ಣುಪ್ರೇರಣಯಾ, ಶ್ರೀವಿಷ್ಣುಪ್ರೀತ್ಯರ್ಥಂ, ಭಗವತೋ ಬಲೇನ, ಭಗವತೋ ವೀರ್ಯೇಣ, ಭಗವತಸ್ತೇಜಸಾ, ಭಗವತಃ ಕರ್ಮಣಾ, ಭಗವತೋ ವಾಸುದೇವಸ್ಯ ಆಜ್ಞಯಾ ಯಥಾಶಕ್ತಿಮಿಲಿತೋಪಚಾರ-ದ್ರವ್ಯೈಃ ಭಗವತಃ ವಾಸುದೇವಸ್ಯ ಆವಾಹನಾದಿಷೋಡಶೋಪಚಾರಪೂಜಾಖ್ಯಂ ಕರ್ಮ ಕರಿಷ್ಯೇ ॥ ಇತಿ ಸಂಕಲ್ಪಯೇತ್ ।

ಈ ರೀತಿಯಾಗಿ ಪೂಜಾಸಂಕಲ್ಪವನ್ನು ಮಾಡಬೇಕು.

**ಅನಂತಕಲ್ಯಾಣಗುಣೈಕಸಿಂಧು-**
**ಶ್ರೀವಿಷ್ಣುನಾ ಪ್ರೇರಿತಮಾನಸೋಽಹಮ್ ।**
**ತಸ್ಯೈವ ವೀರ್ಯೇಣ ಬಲೇನ ತೇಜಸಾ**
**ಸಂಜೀವಿತಸ್ವಾಂತವಪುಃಶ್ಚಿದಿಂದ್ರಿಯಃ ॥**

**ಪ್ರೀತ್ಯರ್ಥಮಸ್ಯೈವ ಕರೋಮಿ ಪೂಜಾ-**
**ವಿಧಿಂ ಪ್ರದಿಷ್ಟಂ ಖಲು ತಂತ್ರಸಾರೇ ।**
**ಬ್ರಹ್ಮಾಂಡಸಾಹಸ್ರಪತೇರ್ದಯಾಲೋ-**
**ರ್ಭಕ್ತ್ಯಾ ಯಥಾಶಕ್ತಿ ಯಥೈವ ಸಂಪತ್ ॥**

ತತಃ ನಾರಾಯಣಮಂತ್ರಂ ಜಪೇತ್ ॥

ನಂತರ ತತ್ತ್ವನ್ಯಾಸ-ಮಾತೃನ್ಯಾಸಪೂರ್ವಕವಾಗಿ ನಾರಾಯಣಮಂತ್ರವನ್ನು ಜಪಿಸಬೇಕು. ನಾರಾಯಣಮಂತ್ರ ಜಪಕ್ರಮವು ಮೊದಲಿಗೆ ನೀಡಲಾಗಿದೆ.

## ದೇವಪ್ರಾರ್ಥನಾ

ನಿಷುಸೀದೇತ್ಯಸ್ಯ ವೈರೂಪೋ ನಭಃಪ್ರಭೇದನ ಋಷಿಃ, ಇಂದ್ರೋ ದೇವತಾ, ತ್ರಿಷ್ಟುಪ್ ಛಂದಃ, ಪ್ರಾರ್ಥನೇ ವಿನಿಯೋಗಃ ॥

ಓಂ ನಿ ಷು ಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಮ್ । ನ ಋತೇ ತ್ವತ್ ಕ್ರಿಯತೇ ಕಿಂ ಚನಾರೇ ಮಹಾಮರ್ಕಂ ಮಘವಞ್ಚಿತ್ರಮರ್ಚ ॥ ಋ.ಸಂ.10.112.9॥

ಆರಾಧ್ಯಸೇ ಪ್ರಾಣಭೃತಾಂ ಪ್ರಣೇತ್ರಾ
ಪ್ರಾಣಾಧಿನಾಥೇನ ಸಮೀರಣೇನ ।
ನಾರಾಯಣ ಜ್ಞಾನಸುಖೈಕಪೂರ್ಣ
ಸ್ವಾಮಿನ್ ಮಯಿ ಶ್ರೀರಮಣ ಪ್ರಸೀದ ॥

ಬಿಂಬೋಽಸಿ ಪ್ರತಿಬಿಂಬೋಽಸ್ಮಿ ತವ ಯದ್ಯಪಿ ಚಾಂತರಮ್ ।
ಸ್ವಾಮಿನ್ ನಿರ್ದೋಷ ಮದ್ದೋಷಾನ್ ವಿರೇಚಯ ನಮೋಸ್ತು ತೇ ॥

ಭಗವನ್ಮನ್ಮಯಾ ಕರ್ಮ ಶುಭಂ ಕಾರಯಸಿ ಪ್ರಭೋ ।
ತತ್ಸರ್ವಂ ವಿಷ್ಣುಪೂಜಾಸ್ತು ತವ ದೇವ ಪ್ರಸಾದತಃ ॥

ಜಯಾಚ್ಯುತ ಜಯಾನಂತ ಜಯ ಕೃಷ್ಣ ಹರೇ ಪ್ರಭೋ ।
ಜಯ ಕೇಶವ ಲಕ್ಷ್ಮೀಶೇತ್ಯೇವಂ ಕೃಷ್ಣಂ ಪರಿವ್ರಜೇತ್ ॥

ಮಯಿ ಸ್ಥಿತೋ ಮದಂಗೇಷು ಸ್ವತಂತ್ರೋ ವ್ಯಾಪ್ತವಾನ್ ಹರಿಃ ।
ಸ ವಿಷ್ಣುಶ್ಚಾಸ್ವತಂತ್ರಂ ಮಾಂ ಸ್ವೇಚ್ಛಯಾ ವರ್ತಯತ್ಯಜಃ ॥

ಅನಂಶಸ್ಯಾಽಪಿ ಜೀವಸ್ಯ ಕಿಂಚಿತ್ಸಾಮರ್ಥ್ಯಯೋಜನಾಮ್ ।
ಕಾರ್ಯೇಷು ಯಃ ಕರೋತ್ಯದ್ಧಾ ನಮಸ್ತಸ್ಮೈ ಸ್ವಯಂಭುವೇ ॥

ಸ್ವವಂದನಂ ಯಥಾ ಪಿತ್ರಾ ಕಾರಿತಂ ಶಿಶುಕರ್ತೃಕಮ್ ।
ಏವಂ ಪೂಜಾ ವಿಷ್ಣ್ವಧೀನಾ ಭವೇಜ್ಜೀವಕೃತೇತ್ಯಪಿ ॥

ಜ್ಞಾನಕರ್ಮೇಂದ್ರಿಯಗತೈಃ ಬ್ರಹ್ಮರುದ್ರಪುರಸ್ಸರೈಃ ।
ಸನ್ಮಾರ್ಗೇ ಪ್ರೇರಿತೋಽಹಂ ತ್ವಾ ಪೂಜಯಾಮ್ಯದ್ಯ ಮಾಧವ ॥

ಇತಿ ವದನ್ ಪ್ರಾರ್ಥನಾಖ್ಯಯಾ ಮುದ್ರಯಾ ದೇವದೇವಂ ಪ್ರಾರ್ಥಯೇತ್ ॥

ಈ ಮಂತ್ರಗಳನ್ನು ಹೇಳುತ್ತಾ ಪ್ರಾರ್ಥನಾಮುದ್ರೆಯಿಂದ ಪರಮಾತ್ಮನನ್ನು ಪ್ರಾರ್ಥಿಸಬೇಕು.

## ಕಲಶಪೂಜಾ

ಅಭಿಷೇಕಕ್ಕಾಗಿ ದೊಡ್ಡದಾದ ಒಂದು ಕಲಶವನ್ನು, ಕುಂಭಾಭಿಷೇಕಕ್ಕಾಗಿ ಸಣ್ಣದಾದ ಮತ್ತೊಂದು ಕಲಶವನ್ನು ಇಡಬೇಕು.

**ಓಂ ಪಕ್ಷಿರಾಜಾಯ ವಿದ್ಮಹೇ ವಕ್ರತುಂಡಾಯ ಧೀಮಹಿ । ತನ್ನೋ ಗರುಡಃ ಪ್ರಚೋದಯಾತ್ ॥**

**ತತ್ಪುರುಷಾಯ ವಿದ್ಮಹೇ ಸುವರ್ಣಪಕ್ಷಾಯ ಧೀಮಹಿ । ತನ್ನೋ ಗರುಡಃ ಪ್ರಚೋದಯಾತ್ ॥**

**ಇತಿ ಮಂತ್ರಾಭ್ಯಾಂ ನಿರ್ವಿಷೀಕರಣಾರ್ಥಂ ಗರುಡಮುದ್ರಾಂ ಪ್ರದರ್ಶಯೇತ್।**

ಕಲಶಗಳ ಜಲದಲ್ಲಿಯ ವಿಷವನ್ನೆಲ್ಲ ತೊಲಗಿಸುವುದಕ್ಕಾಗಿ ಈ ಎರಡು ಮಂತ್ರಗಳಿಂದ ಗರುಡಮುದ್ರೆಯನ್ನು ತೋರಿಸಬೇಕು.

**ಧೇನುಮುದ್ರಾಂ ಸ್ರವದ್ಧಾರಾಂ ಶುದ್ಧಾಂ ಪೂರ್ಣಾಂ ವಿಚಿಂತಯೇತ್ ।**

**ಇತ್ಯುಕ್ತರೀತ್ಯಾ ಕಾಮಧೇನೋ ಅಮೃತಂ ದುಹೇತಿ ಧ್ಯಾತ್ವಾ**

ಹೇ ಕಾಮಧೇನುವೇ ಅಮೃತದೋಹನ ಮಾಡು ಎಂಬುದಾಗಿ ಧ್ಯಾನ ಮಾಡಬೇಕು.

**ಸರ್ವಕಾಮದುಘೇ ದೇವಿ ಸರ್ವತೀರ್ಥಾಭಿಷೇಚಿನಿ ।**
**ಪಾವನೇ ಸುರಭಿಶ್ರೇಷ್ಠೇ ದೇವಿ ತುಭ್ಯಂ ನಮೋಽಸ್ತು ತೇ ॥**

**ಅಮೃತಸ್ರಾವಿಣ್ಯೈ ಸುರಭ್ಯೈ ನಮಃ ।**

**ಇತಿ ಮಂತ್ರೇಣ ಅಮೃತೀಕರಣಾರ್ಥಂ ಧೇನುಮುದ್ರಾಂ ಪ್ರದರ್ಶಯೇತ್ ।**

ಜಲವೆಲ್ಲ ಅಮೃತರೂಪವಾಗಲು ಈ ಮಂತ್ರದಿಂದ ಧೇನುಮುದ್ರೆಯನ್ನು ತೋರಿಸಬೇಕು.

**ಓಂ ನಮೋ ಭಗವತೇ ಪಾಂಚಜನ್ಯಾಯ ಮಹಾಶಂಖಾಯ ಸರ್ವಪಾತಾಲವಾಸಿನಾಂ ವಿಕ್ಷೋಭಕಾಯ ಹುಂ ಫಟ್ ಸ್ವಾಹಾ ॥**

**ಇತಿ ಮಂತ್ರೇಣ ಪವಿತ್ರೀಕರಣಾರ್ಥಂ ಶಂಖಮುದ್ರಾಂ ಪ್ರದರ್ಶಯೇತ್ ।**

ಜಲವೆಲ್ಲ ಪವಿತ್ರವಾಗಲು ಈ ಮಂತ್ರದಿಂದ ಶಂಖಮುದ್ರೆಯನ್ನು ತೋರಿಸಬೇಕು.

**ಓಂ ನಮಃ ಸುದರ್ಶನಾಯ ಮಹಾಚಕ್ರಾಯ ಹುಂ ಫಟ್ ಸ್ವಾಹಾ ॥**

**ಇತಿ ಮಂತ್ರೇಣ ಸಂರಕ್ಷಣಾರ್ಥಂ ಚಕ್ರಮುದ್ರಾಂ ಪ್ರದರ್ಶಯೇತ್ ।**

ಸಂರಕ್ಷಣೆಗಾಗಿ ಈ ಮಂತ್ರದಿಂದ ಚಕ್ರಮುದ್ರೆಯನ್ನು ತೋರಿಸಬೇಕು.

**ಓಂ ನಮೋ ಭಗವತ್ಯೈ ಗದಾಯೈ ಭಾವರೂಪಿಣ್ಯೈ ಕೌಮೋದಿಕ್ಯೈ ಹುಂ ಫಟ್ ಸ್ವಾಹಾ ॥**

**ಇತಿ ಮಂತ್ರೇಣ ದಿಗ್ಬಂಧನಾರ್ಥಂ ಗದಾಮುದ್ರಾಂ ಪ್ರದರ್ಶಯೇತ್ ।**

ದಿಗ್ಬಂಧನಕ್ಕಾಗಿ ಗದಾಮುದ್ರೆಯನ್ನು ಈ ಮಂತ್ರದಿಂದ ತೋರಿಸಬೇಕು.

**ಜಲಶೋಧನಾರ್ಥಂ ಪದ್ಮಮುದ್ರಾಂ, ಚಂದ್ರಮುದ್ರಾಂ, ನಾರಾಚಮುದ್ರಾಂ, ಹಂಸಮುದ್ರಾಂ ಚ ಪ್ರದರ್ಶಯೇತ್ ॥**

ನಂತರ ಜಲಶೋಧನಕ್ಕಾಗಿ ಪದ್ಮಮುದ್ರೆಯನ್ನು, ಚಂದ್ರಮುದ್ರೆಯನ್ನು ಬಾಣಮುದ್ರೆಯನ್ನು, ಹಂಸಮುದ್ರೆಯನ್ನು ತೋರಿಸಬೇಕು.

**ತತಃ ಕಲಶದ್ವಯಂ ಸ್ಪೃಷ್ಟ್ವಾ ।**

ಕೈಯಿಂದ ಎರಡೂ ಕಲಶಗಳನ್ನು ಮುಟ್ಟುತ್ತಾ ಈ ಶ್ಲೋಕಗಳನ್ನು ಪಠಿಸಬೇಕು.

**ಕಲಶಸ್ಯ ಮುಖೇ ವಿಷ್ಣುಃ ಕಂಠೇ ರುದ್ರಃ ಸಮಾಶ್ರಿತಃ ।**
**ಮೂಲೇ ತತ್ರ ಸ್ಥಿತೋ ಬ್ರಹ್ಮಾ ಮಧ್ಯೇ ಮಾತೃಗಣಾಸ್ತಥಾ ॥**

**ಕುಕ್ಷೌ ತು ಸಾಗರಾಸ್ಸರ್ವೇ ಸಪ್ತದ್ವೀಪಾ ವಸುಂಧರಾ ।**
**ಋಗ್ವೇದೋಽಥ ಯಜುರ್ವೇದಃ ಸಾಮವೇದೋ ಹ್ಯಥರ್ವಣಃ ॥**

ಅಂಗೈಶ್ಚ ಸಹಿತಾಸ್ಸರ್ವೇ ಕಲಶಂ ತು ಸಮಾಶ್ರಿತಾಃ ।
ಅತ್ರ ಗಾಯತ್ರೀ ಸಾವಿತ್ರೀ ಶಾಂತಿಃ ಪುಷ್ಟಿಕರೀ ತಥಾ ॥

ಆಯಾಂತು ದೇವಪೂಜಾರ್ಥಮಭಿಷೇಕಾರ್ಥಮಾದೃತಾಃ ।
ಸರ್ವೇ ಸಮುದ್ರಾಃ ಸರಿತಃ ತೀರ್ಥಾನಿ ಜಲದಾ ನದಾಃ ।
ಆಯಾಂತು ದೇವಪೂಜಾರ್ಥಮಭಿಷೇಕಾರ್ಥಮಾದರಾತ್ ॥

ಇಮಂ ಮೇ ಇತ್ಯಸ್ಯ ಸಿಂಧುಕ್ಷಿತ್ ಪ್ರೈಯಮೇಧ ಋಷಿಃ, ನದ್ಯೋ ದೇವತಾಃ, ಜಗತೀ ಛಂದಃ, ನದೀಪ್ರಾರ್ಥನೇ ವಿನಿಯೋಗಃ ॥

ಓಂ ಇಮಂ ಮೇ ಗಂಗೇ ಯಮುನೇ ಸರಸ್ವತಿ ಶುತುದ್ರಿ ಸ್ತೋಮಂ ಸಚತಾ ಪರುಷ್ಣ್ಯಾ । ಅಸಿಕ್ನ್ಯಾ ಮರುದ್ವೃಧೇ ವಿತಸ್ತಯಾರ್ಜೀಕೀಯೇ ಶೃಣುಹ್ಯಾ ಸುಷೋಮಯಾ ॥ ಋ.ಸಂ.10.75.5॥

ಗಂಗೇ ಚ ಯಮುನೇ ಚೈವ ಗೋದಾವರಿ ಸರಸ್ವತಿ ।
ನರ್ಮದೇ ಸಿಂಧು ಕಾವೇರಿ ಜಲೇಽಸ್ಮಿನ್ ಸನ್ನಿಧಿಂ ಕುರು ॥

ಇತಿ ಮಂತ್ರಾಭ್ಯಾಂ ಕಲಶದ್ವಯೇ ತುಲಸೀದಲೇ ನಿಧಾಯ, ತತಃ ಸ್ನಾನೀಯಕಲಶಸ್ಯ ಮುಖೇ ಪೂರ್ವಾದಿಚತುರ್ದಿಕ್ಷು ಗಂಧತುಲಸೀದಲೈಃ ಅರ್ಚೇತ್ ॥

ಈ ಎರಡು ಮಂತ್ರಗಳಿಂದ ಎರಡು ಕಲಶಗಳಲ್ಲಿ ತುಲಸೀದಲಗಳನ್ನು ಹಾಕಿ, ನಂತರ ಸ್ನಾನೀಯಕಲಶದ ಮುಖಭಾಗದಲ್ಲಿ ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಗಂಧವನ್ನು ಹಚ್ಚಿ, ತುಲಸಿಗಳಿಂದ ಕಲಶವನ್ನು ಅರ್ಚಿಸಬೇಕು.

ಕಲಶದ್ವಯಸ್ಥಜಲೇ ಸ್ನಾನೀಯಕಲಶೇ ಅಜಾದಿಶತಕಲಶದೇವತಾಭಿಃ ಸಹಿತಂ 'ಶ್ರೀನಾರಾಯಣಂ ಆವಾಹಯಾಮಿ ಆವಾಹಯಾಮಿ' ಇತಿ ದ್ವಿರುಚ್ಚಾರಯೇತ್ ।

ಎರಡು ಕಲಶಗಳಲ್ಲಿಯ ಜಲದಲ್ಲಿ ಸ್ನಾನೀಯಕಲಶದಲ್ಲಿ ಅಜಾದಿ ದೇವತೆಗಳಿಂದ ಸಹಿತನಾದ ಶ್ರೀನಾರಾಯಣನನ್ನು ಆವಾಹಯಾಮಿ ಆವಾಹಯಾಮಿ ಎಂದು ಎರಡು ಬಾರಿ ಹೇಳುತ್ತಾ ಆವಾಹನೆ ಮಾಡಬೇಕು.

ಮೊದಲು ಓಂಕಾರವನ್ನು ಕೊನೆಯಲ್ಲಿ ನಮಃ ಶಬ್ದವನ್ನು ಸಂಯೋಜನ ಮಾಡಿಕೊಂಡು ಮುಂದೆ ತಿಳಿಸಿದಂತೆ ಮಂತ್ರಗಳನ್ನು ಪಠಿಸಬೇಕು.

ಓಂ ಅಂ ಅಜಾಯ ನಮಃ
ಓಂ ಆಂ ಆನಂದಾಯ ನಮಃ
ಓಂ ಇಂ ಇಂದ್ರಾಯ ನಮಃ
ಓಂ ಈಂ ಈಶಾಯ ನಮಃ
ಓಂ ಉಂ ಉಗ್ರಾಯ ನಮಃ
ಓಂ ಊಂ ಊರ್ಜಾಯ ನಮಃ
ಓಂ ಋಂ ಋತಂಭರಾಯ ನಮಃ
ಓಂ ೠಂ ೠಘಾಯ ನಮಃ
ಓಂ ಌಂ ಌಶಾಯ ನಮಃ
ಓಂ ೡಂ ೡಜಯೇ ನಮಃ
ಓಂ ಏಂ ಏಕಾತ್ಮನೇ ನಮಃ
ಓಂ ಐಂ ಐರಾಯ ನಮಃ
ಓಂ ಓಂ ಓಜೋಭೃತೇ ನಮಃ
ಓಂ ಔಂ ಔರಸಾಯ ನಮಃ
ಓಂ ಅಂ ಅಂತಾಯ ನಮಃ
ಓಂ ಅಃ ಅರ್ಧಗರ್ಭಾಯ ನಮಃ
ಓಂ ಕಂ ಕಪಿಲಾಯ ನಮಃ
ಓಂ ಖಂ ಖಪತಯೇ ನಮಃ
ಓಂ ಗಂ ಗರುಡಾಸನಾಯ ನಮಃ
ಓಂ ಘಂ ಘರ್ಮಾಯ ನಮಃ
ಓಂಙಂ ಙಸಾರಾಯ ನಮಃ
ಓಂ ಚಂ ಚಾರ್ವಂಗಾಯ ನಮಃ
ಓಂ ಛಂ ಛಂದೋಗಮ್ಯಾಯ ನಮಃ
ಓಂ ಜಂ ಜನಾರ್ದನಾಯ ನಮಃ
ಓಂ ಝಂ ಝೂಟಿತಾರಯೇ ನಮಃ
ಓಂ ಞಂ ಞಮಾಯ ನಮಃ
ಓಂ ಟಂ ಟಂಕಿನೇ ನಮಃ
ಓಂ ಠಂ ಠಲಕಾಯ ನಮಃ
ಓಂ ಡಂ ಡರಕಾಯ ನಮಃ
ಓಂ ಢಂ ಢರಿಣೇ ನಮಃ
ಓಂ ಣಂ ಣಾತ್ಮನೇ ನಮಃ
ಓಂ  ತಂ ತಾರಾಯ ನಮಃ
ಓಂ ಥಂ ಥಭಾಯ ನಮಃ
ಓಂ ದಂ ದಂಡಿನೇ ನಮಃ
ಓಂ ಧಂ ಧನ್ವಿನೇ ನಮಃ
ಓಂ ನಂ ನಮ್ಯಾಯ ನಮಃ
ಓಂ ಪಂ ಪರಾಯ ನಮಃ
ಓಂ ಫಂ ಫಲಿನೇ ನಮಃ
ಓಂ ಬಂ ಬಲಿನೇ ನಮಃ
ಓಂ ಭಂ ಭಗಾಯ ನಮಃ
ಓಂ ಮಂ ಮನವೇ ನಮಃ
ಓಂ ಯಂ ಯಜ್ಞಾಯ ನಮಃ
ಓಂ ರಂ ರಾಮಾಯ ನಮಃ
ಓಂ ಲಂ ಲಕ್ಷ್ಮೀಪತಯೇ ನಮಃ
ಓಂ ವಂ ವರಾಯ ನಮಃ
ಓಂ ಶಂ ಶಾಂತಸಂವಿದೇ ನಮಃ
ಓಂ ಷಂ ಷಡ್ಗುಣಾಯ ನಮಃ
ಓಂ ಸಂ ಸಾರಾತ್ಮನೇ ನಮಃ
ಓಂ ಹಂ ಹಂಸಾಯ ನಮಃ
ಓಂ ಳಂ ಳಾಳುಕಾಯ ನಮಃ
ಓಂ ಕ್ಷಂ ಲಕ್ಷ್ಮೀನೃಸಿಂಹಾಯ ನಮಃ

ಓಂ ಕೇಶವಾಯ ನಮಃ, ಓಂ ನಾರಾಯಣಾಯ ನಮಃ, ಓಂ ಮಾಧವಾಯ ನಮಃ, ಓಂ ಗೋವಿಂದಾಯ ನಮಃ, ಓಂ ವಿಷ್ಣವೇ ನಮಃ, ಓಂ ಮಧುಸೂದನಾಯ ನಮಃ, ಓಂ ತ್ರಿವಿಕ್ರಮಾಯ ನಮಃ, ಓಂ ವಾಮನಾಯ ನಮಃ, ಓಂ ಶ್ರೀಧರಾಯ

**ನಮಃ, ಓಂ ಹೃಷೀಕೇಶಾಯ ನಮಃ, ಓಂ ಪದ್ಮನಾಭಾಯ ನಮಃ, ಓಂ ದಾಮೋದರಾಯ ನಮಃ, ಓಂ ಸಂಕರ್ಷಣಾಯ ನಮಃ, ಓಂ ವಾಸುದೇವಾಯ ನಮಃ, ಓಂ ಪ್ರದ್ಯುಮ್ನಾಯ ನಮಃ, ಓಂ ಅನಿರುದ್ಧಾಯ ನಮಃ, ಓಂ ಪುರುಷೋತ್ತಮಾಯ ನಮಃ, ಓಂ ಅಧೋಕ್ಷಜಾಯ ನಮಃ, ಓಂ ನಾರಸಿಂಹಾಯ ನಮಃ, ಓಂ ಅಚ್ಯುತಾಯ ನಮಃ, ಓಂ ಜನಾರ್ದನಾಯ ನಮಃ, ಓಂ ಉಪೇಂದ್ರಾಯ ನಮಃ, ಓಂ ಹರಯೇ ನಮಃ, ಓಂ ಶ್ರೀಕೃಷ್ಣಾಯ ನಮಃ 24**

**ಓಂ ವಿಶ್ವಾಯ ನಮಃ, ಓಂ ತೈಜಸಾಯ ನಮಃ, ಓಂ ಪ್ರಾಜ್ಞಾಯ ನಮಃ, ಓಂ ತುರೀಯಾಯ ನಮಃ, ಓಂ ಆತ್ಮನೇ ನಮಃ, ಓಂ ಅಂತರಾತ್ಮನೇ ನಮಃ, ಓಂ ಪರಮಾತ್ಮನೇ ನಮಃ, ಓಂ ಜ್ಞಾನಾತ್ಮನೇ ನಮಃ (8)**

**ಓಂ ವಾಸುದೇವಾಯ ನಮಃ, ಓಂ ಸಂಕರ್ಷಣಾಯ ನಮಃ, ಓಂ ಪ್ರದ್ಯುಮ್ನಾಯ ನಮಃ, ಓಂ ಅನಿರುದ್ಧಾಯ ನಮಃ (4)**

**ಓಂ ಮತ್ಸ್ಯಾಯ ನಮಃ, ಓಂ ಕೂರ್ಮಾಯ ನಮಃ, ಓಂ ವರಾಹಾಯ ನಮಃ, ಓಂ ನರಸಿಂಹಾಯ ನಮಃ, ಓಂ ವಾಮನಾಯ ನಮಃ, ಓಂ ಭಾರ್ಗವಾಯ ನಮಃ, ಓಂ ರಾಘವಾಯ ನಮಃ, ಓಂ ವೇದವ್ಯಾಸಾಯ ನಮಃ, ಓಂ ಕೃಷ್ಣಾಯ ನಮಃ, ಓಂ ದತ್ತಾತ್ರೇಯಾಯ ನಮಃ, ಓಂ ಬುದ್ಧಾಯ ನಮಃ, ಓಂ ಕಲ್ಕಿನೇ ನಮಃ, ಓಂ ಶಿಂಶುಮಾರಾಯ ನಮಃ.**

**ಇತಿ ಭಗವನ್ಮೂರ್ತೀಃ ಸ್ನಾನೀಯಕಲಶೇ ಆವಾಹಯೇತ್ ।**

ಈ ಎಲ್ಲ ಭಗವಂತನ ಮೂರ್ತಿಗಳನ್ನು ಸ್ನಾನೀಯಕಲಶದಲ್ಲಿ ಆವಾಹನ ಮಾಡಬೇಕು.

**ಏವಂ ಪೂರ್ಣಕಲಶೇ 'ಓಂ ಶಿಂಶುಮಾರಾಯ ನಮಃ ಇತ್ಯಾರಭ್ಯ ಓಂ ಅಂ ಅಜಾಯ ನಮಃ' ಇತ್ಯಂತಂ ವ್ಯುತ್ಕ್ರಮೇಣ ಆವಾಹಯೇತ್ ॥**

ಇದೇ ರೀತಿಯಾಗಿ ಓಂ ಶಿಂಶುಮಾರಾಯ ನಮಃ ಎಂದು ಪ್ರಾರಂಭ ಮಾಡಿ ಓಂ ಅಂ ಅಜಾಯ ನಮಃ ಎಂಬಲ್ಲಿ ವರೆಗೆ ವಿಪರೀತಕ್ರಮದಿಂದ ಭಗವದ್ರೂಪಗಳನ್ನು ಆವಾಹನ ಮಾಡಬೇಕು.

**ಓಂ ಶಿಂಶುಮಾರಾಯ ನಮಃ, ಓಂ ಕಲ್ಕಿನೇ ನಮಃ ಓಂ ಬುದ್ಧಾಯ ನಮಃ, ಓಂ ದತ್ತಾತ್ರೇಯಾಯ ನಮಃ, ಓಂ ಕೃಷ್ಣಾಯ ನಮಃ, ಓಂ ವೇದವ್ಯಾಸಾಯ ನಮಃ,**

ಓಂ ರಾಘವಾಯ ನಮಃ, ಓಂ ಭಾರ್ಗವಾಯ ನಮಃ, ಓಂ ವಾಮನಾಯ ನಮಃ, ಓಂ ನರಸಿಂಹಾಯ ನಮಃ, ಓಂ ವರಾಹಾಯ ನಮಃ, ಓಂ ಕೂರ್ಮಾಯ ನಮಃ, ಓಂ ಮತ್ಸ್ಯಾಯ ನಮಃ ।

ಓಂ ಅನಿರುದ್ಧಾಯ ನಮಃ, ಓಂ ಪ್ರದ್ಯುಮ್ನಾಯ ನಮಃ, ಓಂ ಸಂಕರ್ಷಣಾಯ ನಮಃ, ಓಂ ವಾಸುದೇವಾಯ ನಮಃ 4

ಓಂ ಜ್ಞಾನಾತ್ಮನೇ ನಮಃ, ಓಂ ಪರಮಾತ್ಮನೇ ನಮಃ, ಓಂ ಅಂತರಾತ್ಮನೇ ನಮಃ, ಓಂ ಆತ್ಮನೇ ನಮಃ, ಓಂ ತುರೀಯಾಯ ನಮಃ, ಓಂ ಪ್ರಾಜ್ಞಾಯ ನಮಃ, ಓಂ ತೈಜಸಾಯ ನಮಃ, ಓಂ ವಿಶ್ವಾಯ ನಮಃ, 8

ಓಂ ಕೃಷ್ಣಾಯ ನಮಃ, ಓಂ ಹರಯೇ ನಮಃ, ಓಂ ಉಪೇಂದ್ರಾಯ ನಮಃ, ಓಂ ಜನಾರ್ದನಾಯ ನಮಃ, ಓಂ ಅಚ್ಯುತಾಯ ನಮಃ, ಓಂ ನಾರಸಿಂಹಾಯ ನಮಃ, ಓಂ ಅಧೋಕ್ಷಜಾಯ ನಮಃ, ಓಂ ಪುರುಷೋತ್ತಮಾಯ ನಮಃ, ಓಂ ಅನಿರುದ್ಧಾಯ ನಮಃ, ಓಂ ಪ್ರದ್ಯುಮ್ನಾಯ ನಮಃ, ಓಂ ವಾಸುದೇವಾಯ ನಮಃ, ಓಂ ಸಂಕರ್ಷಣಾಯ ನಮಃ, ಓಂ ದಾಮೋದರಾಯ ನಮಃ, ಓಂ ಪದ್ಮನಾಭಾಯ ನಮಃ, ಓಂ ಹೃಷೀಕೇಶಾಯ ನಮಃ, ಓಂ ಶ್ರೀಧರಾಯ ನಮಃ, ಓಂ ವಾಮನಾಯ ನಮಃ, ಓಂ ತ್ರಿವಿಕ್ರಮಾಯ ನಮಃ, ಓಂ ಮಧುಸೂದನಾಯ ನಮಃ, ಓಂ ವಿಷ್ಣವೇ ನಮಃ, ಓಂ ಗೋವಿಂದಾಯ ನಮಃ, ಓಂ ಮಾಧವಾಯ ನಮಃ, ಓಂ ನಾರಾಯಣಾಯ ನಮಃ, ಓಂ ಕೇಶವಾಯ ನಮಃ,) 24

ಓಂ ಕ್ಷಂ ಲಕ್ಷ್ಮೀನೃಸಿಂಹಾಯ ನಮಃ, ಓಂ ಳಂ ಳಾಳುಕಾಯ ನಮಃ, ಓಂ ಹಂ ಹಂಸಾಯ ನಮಃ, ಓಂ ಸಂ ಸಾರಾತ್ಮನೇ ನಮಃ, ಓಂ ಷಂ ಷಡ್ಗುಣಾಯ ನಮಃ, ಓಂ ಶಂ ಶಾಂತಸಂವಿದೇ ನಮಃ, ಓಂ ವಂ ವರಾಯ ನಮಃ, ಓಂ ಲಂ ಲಕ್ಷ್ಮೀಪತಯೇ ನಮಃ, ಓಂ ರಂ ರಾಮಾಯ ನಮಃ, ಓಂ ಯಂ ಯಜ್ಞಾಯ ನಮಃ, ಓಂ ಮಂ ಮನವೇ ನಮಃ, ಓಂ ಭಂ ಭಗಾಯ ನಮಃ, ಓಂ ಬಂ ಬಲಿನೇ ನಮಃ, ಓಂ ಫಂ ಫಲಿನೇ ನಮಃ, ಓಂ ಪಂ ಪರಾಯ ನಮಃ, ಓಂ ನಂ ನಮ್ಯಾಯ ನಮಃ, ಓಂ ಧಂ ಧನ್ವಿನೇ ನಮಃ, ಓಂ ದಂ ದಂಡಿನೇ ನಮಃ, ಓಂ ಥಂ ಥಭಾಯ ನಮಃ, ಓಂ ತಂ ತಾರಾಯ ನಮಃ, ಓಂ ಣಂ ಣಾತ್ಮನೇ ನಮಃ, ಓಂ ಢಂ ಢರಿಣೇ ನಮಃ, ಓಂ ಡಂ ಡರಕಾಯ ನಮಃ, ಓಂ ಠಂ ಠಲಕಾಯ ನಮಃ, ಓಂ ಟಂ ಟಂಕಿನೇ ನಮಃ, ಓಂ ಞಂ ಞಮಾಯ ನಮಃ, ಓಂ ಝಂ ಝಾಟಿತಾರಯೇ ನಮಃ, ಓಂ ಜಂ

ಜನಾರ್ದನಾಯ ನಮಃ, ಓಂ ಛಂ ಛಂದೋಗವ್ಯಾಯ ನಮಃ, ಓಂ ಚಂ ಚಾರ್ವಂಗಾಯ ನಮಃ, ಓಂ ಜಂ ಜಸಾರಾಯ ನಮಃ, ಓಂ ಘಂ ಘರ್ಮಾಯ ನಮಃ, ಓಂ ಗಂ ಗರುಡಾಸನಾಯ ನಮಃ, ಓಂ ಖಂ ಖಪತಯೇ ನಮಃ, ಓಂ ಕಂ ಕಪಿಲಾಯ ನಮಃ, ಓಂ ಅಃ ಅರ್ಧಗರ್ಭಾಯ ನಮಃ, ಓಂ ಅಂ ಅಂತಾಯ ನಮಃ, ಓಂ ಔಂ ಔರಸಾಯ ನಮಃ, ಓಂ ಓಂ ಓಜೋಭೃತೇ ನಮಃ, ಓಂ ಐಂ ಐರಾಯ ನಮಃ, ಓಂ ಏಂ ಏಕಾತ್ಮನೇ ನಮಃ, ಓಂ ೡಂ ೡಜಯೇ ನಮಃ, ಓಂ ಌಂ ಌಶಾಯ ನಮಃ, ಓಂ ೠಂ ೠಘಾಯ ನಮಃ, ಓಂ ಋಂ ಋತಂಭರಾಯ ನಮಃ, ಓಂ ಊಂ ಊರ್ಜಾಯ ನಮಃ, ಓಂ ಉಂ ಉಗ್ರಾಯ ನಮಃ, ಓಂ ಈಂ ಈಶಾಯ ನಮಃ, ಓಂ ಇಂ ಇಂದ್ರಾಯ ನಮಃ, ಓಂ ಆಂ ಆನಂದಾಯ ನಮಃ, ಓಂ ಅಂ ಅಜಾಯ ನಮಃ

**ಕಲಶದೇವತಾಭ್ಯಃ ಷೋಡಶೋಪಚಾರಾನ್ ಸಮರ್ಪಯೇತ್ । ಕಲಶದ್ವಯಂ ಸ್ಪೃಷ್ಟ್ವಾ ಸಾನ್ನಿಧ್ಯಾರ್ಥಂ ದ್ವಾದಶವಾರಂ ಮೂಲಮಂತ್ರಂ ಜಪೇತ್॥**

ಕಲಶದೇವತೆಗಳಿಗೆ ಷೋಡಶೋಪಚಾರಗಳನ್ನು ಸಮರ್ಪಿಸಬೇಕು. ಎರಡೂ ಕಲಶಗಳನ್ನು ಮುಟ್ಟುತ್ತಾ ಪರಮಾತ್ಮನ ಸನ್ನಿಧಾನಕ್ಕಾಗಿ ನಾರಾಯಣಮಂತ್ರವನ್ನು ಹನ್ನೆರಡು ಬಾರಿ ಜಪಿಸಬೇಕು.

**ಕಲಶಃ ಕೀರ್ತಿಮಾಯುಷ್ಯಂ ಪ್ರಜ್ಞಾಂ ಮೇಧಾಂ ಶ್ರಿಯಂ ಬಲಮ್ ।**
**ಯೋಗ್ಯತಾಂ ಪಾಪಹಾನಿಂ ಚ ಪುಣ್ಯವೃದ್ಧಿಂ ಚ ಸಾಧಯೇತ್ ॥**

**ಸರ್ವಕ್ಷೇತ್ರಮಯೋ ಯಸ್ಮಾತ್ ಸರ್ವದೇವಮಯೋ ಯತಃ ।**
**ಅತೋ ಹರಿಪ್ರಿಯೋಽಸಿ ತ್ವಂ ಪೂರ್ಣಕುಂಭ ನಮೋಽಸ್ತು ತೇ ॥**

**ಇತಿ ಪ್ರಾರ್ಥ್ಯ 'ಯಸ್ಯ ಸ್ಮೃತ್ಯಾ' ಇತಿ ಸಮಾಪ್ಯ, ಅನೇನ ಕಲಶಪೂಜನೇನ ಬುಧ-ವರುಣಾಂತರ್ಯಾಮಿ ಮುಖ್ಯಪ್ರಾಣಾಂತರ್ಯಾಮಿ ಲಕ್ಷ್ಮೀನಾರಾಯಣಃ ಪ್ರೀಯತಾಂ ಪ್ರೀತೋ ಭವತು ॥**

ಈ ರೀತಿಯಾಗಿ ಕಲಶದೇವತೆಗಳನ್ನು ಪ್ರಾರ್ಥಿಸಿ, **ಯಸ್ಯ ಸ್ಮೃತ್ಯಾ...** ಎಂದು ಶ್ರೀಹರಿಗೆ ಸಮರ್ಪಿಸಿ ಈ ಕಲಶಪೂಜೆಯಿಂದ ಬುಧ-ವರುಣಾಂತರ್ಯಾಮಿಯಾದ ಮುಖ್ಯಪ್ರಾಣಾಂತರ್ಯಾಮಿಯಾದ ಲಕ್ಷ್ಮೀನಾರಾಯಣನು ಪ್ರೀತನಾಗಲಿ ಎಂದು ಪ್ರಾರ್ಥಿಸಬೇಕು.

## ಶಂಖಪೂಜಾ

**ಶಂಖಪೂಜಾಂ ಕರಿಷ್ಯೇ ಇತಿ ಸಂಕಲ್ಪ್ಯ,**

ದೇಶ-ಕಾಲಗಳನ್ನು ಉಚ್ಚರಿಸಿ ಶಂಖಪೂಜೆಯನ್ನು ಮಾಡುತ್ತೇನೆ ಎಂಬುದಾಗಿ ಸಂಕಲ್ಪಿಸಬೇಕು.

**ತ್ವಂ ಪುರಾ ಸಾಗರೋತ್ಪನ್ನೋ ವಿಷ್ಣುನಾ ವಿಧೃತಃ ಕರೇ ।**
**ನಮಿತಸ್ಸರ್ವದೇವೈಶ್ಚ ಪಾಂಚಜನ್ಯ ನಮೋಽಸ್ತು ತೇ ॥**

**(ಗರ್ಭಾ ದೇವಾರಿನಾರೀಣಾಂ ವಿಶೀರ್ಯಂತೇ ಸಹಸ್ರಶಃ ।**
**ತವ ನಾದೇನ ಪಾತಾಲೇ ಪಾಂಚಜನ್ಯ ನಮೋಽಸ್ತು ತೇ ॥**

**ತವ ನಾದೇನ ಜೀಮೂತಾ ವಿದ್ರವಂತಿ ಸುರಾಸುರಾಃ ।**
**ಶಶಾಂಕಾಯುತದೀಪ್ತಾಭ ಪಾಂಚಜನ್ಯ ನಮೋಽಸ್ತು ತೇ ॥**

**ದರ್ಶನೇನ ಹಿ ಶಂಖಸ್ಯ ಕಿಂ ಪುನಃ ಸ್ಪರ್ಶನೇನ ತು ।**
**ವಿಲಯಂ ಯಾಂತಿ ಪಾಪಾನಿ ಹಿಮವತ್ ಭಾಸ್ಕರೋದಯೇ ॥**

**ನತ್ವಾ ಶಂಖಂ ಕರೇ ಧೃತ್ವಾ ಮಂತ್ರೇಣಾನೇನ ವೈಷ್ಣವಃ ।**
**ಯಃ ಸ್ನಾಪಯತಿ ಗೋವಿಂದಂ ತಸ್ಯ ಪುಣ್ಯಮನಂತಕಮ್ ॥)**

**ಶಂಖಂ ಚಂದ್ರಾರ್ಕದೈವತ್ಯಂ ಮಧ್ಯೇ ವರುಣದೈವತಮ್ ।**
**ಪೃಷ್ಠೇ ಪ್ರಜಾಪತಿಂ ವಿದ್ಯಾದಗ್ರೇ ಗಂಗಾ ಸರಸ್ವತೀ ॥**

**ತ್ರೈಲೋಕ್ಯಾಂ ಯಾನಿ ತೀರ್ಥಾನಿ ವಾಸುದೇವಸ್ಯ ಚಾಜ್ಞಯಾ ।**
**ಶಂಖೇ ತಿಷ್ಠಂತಿ ವಿಪ್ರೇಂದ್ರ ತಸ್ಮಾತ್ ಶಂಖಂ ಪ್ರಪೂಜಯೇತ್ ॥**

**ಇತಿ ಶ್ಲೋಕಪಾಠಪೂರ್ವಕಂ ಶಂಖಂ ಸಂಪ್ರಾರ್ಥ್ಯ, ಸ್ನಾನೀಯೋದಕಂ ಉದ್ಧರಿಣ್ಯಾ ಶಂಖಂ ಪೂರಯಿತ್ವಾ ತತ್ರ ತುಲಸೀಂ ಪುಷ್ಪಂ ಚ ನಿಧಾಯ,**

ಈ ರೀತಿಯಾಗಿ ಶಂಖದೇವತೆಯನ್ನು ಪ್ರಾರ್ಥಿಸಿ, ಸ್ನಾನೀಯಪಾತ್ರೆಯಲ್ಲಿಯ ಜಲವನ್ನು ಉದ್ಧರಿಣಿಯಿಂದ ಶಂಖದಲ್ಲಿ ತುಂಬಬೇಕು. ಮತ್ತು ತುಲಸೀ-ಹೂಗಳನ್ನು ಶಂಖದಲ್ಲಿ ಹಾಕಬೇಕು.

"ಓಂ ನಮೋ ಭಗವತೇ ಪಾಂಚಜನ್ಯಾಯ ಮಹಾಶಂಖಾಯ ಸರ್ವಪಾತಾಲವಾಸಿನಾಂ ವಿಕ್ಷೋಭಕಾಯ ಹುಂ ಫಟ್ ಸ್ವಾಹಾ ಓಂ'

**ಇತಿ ಮಂತ್ರೇಣ ಶಂಖಂ ಅಭಿಮಂತ್ರ್ಯ, ಧ್ಯಾನಾವಾಹನಾಸನಾರ್ಘ್ಯಪಾದ್ಯಾ-ಚಮನಮಧುಪರ್ಕಪುನರಾಚಮನಾಖ್ಯಾಷ್ಟೋಪಚಾರೈಃ ತುಲಸೀದಲೈಃ ಶಂಖಂ ಸಂಪೂಜಯೇತ್ ॥**

ಈ ಮಂತ್ರದಿಂದ ಶಂಖವನ್ನು ಅಭಿಮಂತ್ರಿಸಬೇಕು. ಧ್ಯಾನ-ಆವಾಹನ-ಆಸನ-ಅರ್ಘ್ಯ-ಪಾದ್ಯ-ಆಚಮನ-ಮಧುಪರ್ಕ-ಪುನರಾಚಮನ ಎಂಬ ಎಂಟು ಉಪಚಾರಗಳಿಂದ, ತುಲಸೀದಲಗಳಿಂದ ಶಂಖವನ್ನು ಪೂಜಿಸಬೇಕು.

**ಯಸ್ಯ ಸ್ಮೃತ್ಯಾ... ಇತ್ಯುಕ್ತ್ವಾ**

**ಅನೇನ ಶಂಖಪೂಜನೇನ ಭಗವಾನ್ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಂ ಪ್ರೀತೋ ಭವತು ಶ್ರೀಕೃಷ್ಣಾರ್ಪಣಮಸ್ತು ॥**

## ಷಟ್ಪಾತ್ರಪೂಜಾ

ಕರ್ತಾ ಪೂರ್ವಾಭಿಮುಖನಾಗಿ ಕುಳಿತಾಗ ಈ ರೀತಿಯಾಗಿ ಷಟ್ಪಾತ್ರೆಗಳನ್ನು ಸ್ಥಾಪಿಸಬೇಕು.

| | | | |
|---|---|---|---|
| **ವಾಯವ್ಯೇ** | **ಅರ್ಘ್ಯಂ** | **-ಶ್ರೀಃ** | **-ದಾನಮುದ್ರಾ,** |
| **ನೈರ್ಋತ್ಯಾಂ** | **ಪಾದ್ಯಂ** | **-ಸರಸ್ವತೀ** | **-ಅಂಜಲಿಮುದ್ರಾ,** |
| **ಐಶಾನ್ಯಾಂ** | **ಆಚಮನೀಯಂ** | **-ರತಿಃ** | **-ಗೋಕರ್ಣಮುದ್ರಾ,** |
| **ಆಗ್ನೇಯೇ** | **ಸ್ನಾನೀಯಂ** | **-ವರುಣಃ** | **-ಹಂಸಮುದ್ರಾ,** |
| **ಮಧ್ಯೇ** | **ಮಧುಪರ್ಕಂ** | **-ಬ್ರಹ್ಮಾ** | **-ಸೂಕರೀಮುದ್ರಾ,** |
| **ಮಧ್ಯೇ** | **ಪುನರಾಚಮನೀಯಂ** | **-ಶಾಂತಿಃ- ॥** | |

**ಸರ್ವತ್ರ, ತುಲಸೀಂ ನಿಕ್ಷಿಪೇತ್ ।**

ಪಂಚಪಾತ್ರೆಯ ಪೂಜೆಯನ್ನು ಮಾಡಬೇಕು. ವಾಯವ್ಯದಿಕ್ಕಿನಲ್ಲಿ ಅರ್ಘ್ಯಪಾತ್ರೆಯನ್ನು ಇರಿಸಬೇಕು. ಅರ್ಘ್ಯಪಾತ್ರೆಯಲ್ಲಿ ಶ್ರೀದೇವಿಯು ಇದ್ದಾಳೆಂದು ಚಿಂತಿಸಬೇಕು.

ನೈಋತ್ಯದಲ್ಲಿ ಪಾದ್ಯಪಾತ್ರೆಯನ್ನು ಇರಿಸಬೇಕು. ಅಲ್ಲಿ ಸರಸ್ವತಿಯು ಇದ್ದಾಳೆಂದು ಚಿಂತಿಸಬೇಕು.

ಈಶಾನ್ಯದಲ್ಲಿ ಆಚಮನೀಯಪಾತ್ರೆಯನ್ನು ಇರಿಸಬೇಕು. ರತಿಯು ಆ ಪಾತ್ರೆಯಲ್ಲಿ ಇರುವಳೆಂದು ಭಾವಿಸಬೇಕು.

ಆಗ್ನೇಯದಲ್ಲಿ ಸ್ನಾನೀಯಪಾತ್ರೆಯನ್ನು ಇರಿಸಬೇಕು. ವರುಣನು ಸ್ನಾನೀಯಪಾತ್ರೆಯಲ್ಲಿ ಇರುವನೆಂದು ತಿಳಿಯಬೇಕು.

ಮಧ್ಯದಲ್ಲಿ ಮಧುಪರ್ಕ ಪಾತ್ರೆಯನ್ನು ಇರಿಸಬೇಕು. ಬ್ರಹ್ಮದೇವರು ಮಧುಪರ್ಕ ಪಾತ್ರೆಯಲ್ಲಿರುವರೆಂದು ಚಿಂತಿಸಬೇಕು. ಅಲ್ಲಿಯೇ ಪುನರಾಚಮನೀಯ ಪಾತ್ರೆಯನ್ನು ಇರಿಸಬೇಕು. ಅಲ್ಲಿ ಶಾಂತಿಯು ಇರುವಳೆಂದು ಚಿಂತಿಸಬೇಕು. ಈ ಎಲ್ಲ ಪಾತ್ರೆಯಲ್ಲಿಯೂ ತುಲಸಿಯನ್ನು ಹಾಕಬೇಕು.

**ತತಃ ತುಲಸೀದಲಯುಕ್ತೇನ ಶಂಖಗತತೋಯೇನ ಪೂಜಾದ್ರವ್ಯಾಣಿ ದೇವಂ ಚ ತ್ರಿವಾರಂ ಪ್ರೋಕ್ಷಯೇತ್ ।**

ನಂತರ ಶಂಖದಲ್ಲಿ ಶುದ್ಧವಾದ ಜಲವನ್ನು ಹಾಕಬೇಕು. ತುಲಸೀದಲವನ್ನು ಆ ಶಂಖದಲ್ಲಿ ಹಾಕಬೇಕು. ಶಂಖದಲ್ಲಿಯ ಆ ನೀರಿನಿಂದ ಪೂಜಾದ್ರವ್ಯಗಳನ್ನು ಮತ್ತು ಪ್ರತಿಮೆಗಳನ್ನು ಮೂರುಬಾರಿ ಪ್ರೋಕ್ಷಣೆ ಮಾಡಬೇಕು.

**ಸೂಚನೆ-** ಪೂಜಾಸಾಧನದ್ರವ್ಯಗಳನ್ನು ಪ್ರೋಕ್ಷಣ ಮಾಡುವಾಗಲೇ ಶಂಖೋದಕದಿಂದ ನೈವೇದ್ಯವನ್ನು ಕೂಡಾ ಪ್ರೋಕ್ಷಣ ಮಾಡಬೇಕು. ನೈವೇದ್ಯಕಾಲದಲ್ಲಿ ಶಂಖದಿಂದ ಪ್ರೋಕ್ಷಣ ಮಾಡಬಾರದು. ನೈವೇದ್ಯಕಾಲದಲ್ಲಿ ಸಾಕ್ಷಾತ್ತಾಗಿ ಕೈಯಲ್ಲಿಯೇ ಜಲವನ್ನು ತೆಗೆದುಕೊಂಡು ಅದರಿಂದಲೇ ನೈವೇದ್ಯವನ್ನು ಪ್ರೋಕ್ಷಣಮಾಡಬೇಕು. ಈ ರೀತಿಯಾಗಿ ಸಂಪ್ರದಾಯಾಭಿಜ್ಞರು ಹೇಳುತ್ತಾರೆ.

## ಪಂಚಾಮೃತದ್ರವ್ಯಪೂಜಾ

ಶ್ರೀವಿಷ್ಣುಪೂಜಾಂಗಪಂಚಾಮೃತಪೂಜಾಂ ಕರಿಷ್ಯೇ ।

**ಮಧ್ಯೇ ಕ್ಷೀರಂ ತು ದಧ್ಯಾದಿ ನ್ಯಸೇತ್ ಪೂರ್ವಾದಿಷು ಕ್ರಮಾತ್ ।**
**ದುಗ್ಧಂ ತು ದೇವೋ ಗೋವಿಂದೋ ದಧಿ ವಾಮನದೈವತಮ್ ॥**

**ಆಜ್ಯಂ ಚ ವಿಷ್ಣುದೈವತ್ಯಂ ಮಧೂನಿ ಮಧುಸೂದನಮ್ ।**
**ಶರ್ಕರಾಂ ಚಾಚ್ಯುತೋ ವಿದ್ಯಾತ್ ಏತಾಃ ಪಂಚಾಮೃತದೇವತಾಃ ॥**

**ಮಧ್ಯೇ ಕ್ಷೀರೇ ಗೋವಿಂದಂ, ಪೂರ್ವೇ ದಧ್ನಿ ವಾಮನಂ, ದಕ್ಷಿಣೇ ಆಜ್ಯೇ ವಿಷ್ಣುಂ, ಪಶ್ಚಿಮೇ ಮಧುನಿ ಮಧುಸೂದನಂ, ಉತ್ತರೇ ಶರ್ಕರಾಯಾಂ ಅಚ್ಯುತಂ ಸ್ಮರೇತ್ ।**

ಮಧ್ಯದಲ್ಲಿ ಹಾಲಿನ ಪಾತ್ರೆಯನ್ನಿಡಬೇಕು. ಆ ಹಾಲಿನಲ್ಲಿ ಗೋವಿಂದನಿದ್ದಾನೆ ಎಂದು ಚಿಂತಿಸಬೇಕು. ಪೂರ್ವದಲ್ಲಿ ಮೊಸರಿನ ಪಾತ್ರೆಯನ್ನಿಡಬೇಕು. ಮೊಸರಿನಲ್ಲಿ ವಾಮನನಿದ್ದಾನೆ ಎಂದು ಸ್ಮರಿಸಬೇಕು. ದಕ್ಷಿಣದಲ್ಲಿ ತುಪ್ಪದ ಪಾತ್ರೆಯನ್ನಿಡಬೇಕು. ಅಲ್ಲಿ ವಿಷ್ಣುವಿದ್ದಾನೆಂದು ಭಾವಿಸಬೇಕು. ಪಶ್ಚಿಮದಲ್ಲಿ ಜೇನುತುಪ್ಪದ ಪಾತ್ರೆಯನ್ನಿಡಬೇಕು. ಅಲ್ಲಿ ಮಧುಸೂದನನನ್ನು ಚಿಂತಿಸಬೇಕು. ಉತ್ತರದಲ್ಲಿ ಸಕ್ಕರೆಯ ಪಾತ್ರೆಯನ್ನಿಡಬೇಕು. ಅಲ್ಲಿ ಅಚ್ಯುತನಿದ್ದಾನೆಂದು ಭಾವಿಸಬೇಕು.

**ತತಃ ಪಂಚಾಮೃತದೇವತಾಭ್ಯಃ ಗರುಡ-ಧೇನು-ಶಂಖ-ಚಕ್ರ-ಪದ್ಮಾಖ್ಯಪಂಚ-ಮುದ್ರಾಃ ತತ್ತನ್ಮಂತ್ರೈಃ ಪ್ರದರ್ಶಯೇತ್ । ತತ್ರ ತುಲಸೀ-ಪುಷ್ಪಾಣಿ ಕ್ಷಿಪ್ತ್ವಾ ಮೂಲೇನಾಷ್ಟವಾರಮಭಿಮಂತ್ರ್ಯ ನಮಸ್ಕೃತ್ಯ ವಿಷ್ಣುಗಾಯತ್ರ್ಯಾ ಅಭಿಮಂತ್ರಯೇತ್।**

ನಂತರ ಪಂಚಾಮೃತದೇವತೆಗಳಿಗೆ ಗರುಡಾದಿ ಐದು ಮುದ್ರೆಗಳನ್ನು ಪೂರ್ವೋಕ್ತವಾದ ಮಂತ್ರಗಳಿಂದ ಪ್ರದರ್ಶನ ಮಾಡಬೇಕು. ಆ ಪಂಚಾಮೃತ ಪಾತ್ರೆಗಳಲ್ಲಿ ತುಲಸೀ-ಹೂಗಳನ್ನು ಹಾಕಬೇಕು. ನಾರಾಯಣಮಂತ್ರದಿಂದ ಎಂಟು ಬಾರಿ ಮತ್ತು ವಿಷ್ಣುಗಾಯತ್ರಿಯಿಂದಲೂ ಅಭಿಮಂತ್ರಿಸಿ ನಮಸ್ಕರಿಸಬೇಕು.

**ತತಃ ಪಂಚಾಮೃತದೇವತಾಭ್ಯಃ ಆವಾಹನಾದಿ ಷೋಡಶೋಪಚಾರಪೂಜಾಂ ಕುರ್ಯಾತ್ ॥**

ನಂತರ ಪಂಚಾಮೃತದಲ್ಲಿರುವ ಎಲ್ಲ ಭಗವದ್ರೂಪಗಳಿಗೆ ಆವಾಹನಾದಿ ಷೋಡಶೋಪಚಾರಗಳನ್ನು ಸಮರ್ಪಿಸಬೇಕು. ಈ ಪ್ರಸಂಗದಲ್ಲಿ ಪೀಠಪೂಜೆಗಿಂತಲೂ ಪೂರ್ವದಲ್ಲಿ ಮಾನಸಪೂಜೆಯನ್ನು ಮಾಡಬೇಕು.

## ಪೀಠಪೂಜಾ

**ವಿಷ್ಣೋರಾಸನಭೂತಾಯ ದಿವ್ಯರತ್ನಮಯಾಯ ಚ ।**
**ಪ್ರಧಾನಪುರುಷೇಶಾಯ ಮಹಾಪೀಠಾಯ ತೇ ನಮಃ ॥**

ನಂತರ ಪೀಠದ ಚಿಂತನೆಯನ್ನು ಈ ರೀತಿಯಾಗಿ ಮಾಡಬೇಕು. ವಿಷ್ಣುವಿನ ಆ ಪೀಠವನ್ನು ನಮಸ್ಕರಿಸಬೇಕು.

**ಶ್ರೀಮದನಂತಾಯ ನಮಃ । ತದುಪರಿ ರಮಾಯೈ ನಮ ಇತಿ ಪೀಠದೇವತಾಃ ಸ್ಮೃತ್ವಾ ನಮೇತ್ ॥**

ಈ ಆಸನದಲ್ಲಿ ಶೇಷನು ಸನ್ನಿಹಿತನಾಗಿ ದೇವರಿಗೆ ಆಸನವಾಗಿದ್ದಾನೆ. ಆ ಶೇಷನಲ್ಲಿ ವಾಯುದೇವರು ಮತ್ತು ರಮಾದೇವಿಯರು ಸನ್ನಿಹಿತರಾಗಿ ಪರಮಾತ್ಮನಿಗೆ ಮುಖ್ಯವಾಗಿ ಆಸನರಾಗಿದ್ದಾರೆ ಎಂದು ತಿಳಿದುಕೊಳ್ಳಬೇಕು. ಹೀಗೆ ಸಂಕ್ಷೇಪವಾಗಿ ಪೀಠದೇವತೆಗಳನ್ನು ಧ್ಯಾನ ಮಾಡುವ ಮೂಲಕ ಪೀಠಪೂಜೆಯನ್ನು ಮಾಡಬೇಕು.

ಸಾಧ್ಯವಾದಾಗ ವಿಸ್ತಾರವಾದ ಪೀಠಪೂಜೆಯನ್ನು ಮಾಡಬೇಕು.

**ಚಕ್ರಾಬ್ಜಮಂಡಲೇ ಪೀಠಪೂಜಾಂ ಕರ್ತುಂ ಗುರ್ವನುಜ್ಞಾಸಂಪಾದನಾರ್ಥಂ ಗುರುಪೂಜಾಂ ಕರಿಷ್ಯೇ ।**

**ಮಧ್ಯೇ -ಓಂ ಪರದೇವತಾಯೈ ನಮಃ ।**
**ತಸ್ಯ ವಾಮೇ - ಓಂ ಗುರುಭ್ಯೋ (ವಾಯವೇ) ನಮಃ ।**
**ದಕ್ಷಿಣೇ -ಓಂ (ಬ್ರಹ್ಮವಿಷ್ಣುಮಹೇಶ್ವರಾದಿ)ಸರ್ವದೇವತಾಭ್ಯೋ ನಮಃ ।**
**ಪುನರ್ವಾಮೇ -ಓಂ (ಸನಕಾದಿ)ಸರ್ವಗುರುಭ್ಯೋ ನಮಃ ।**

**ಏತೈರನುಜ್ಞಾತಃ ಪೀಠಪೂಜಾಂ ಕರಿಷ್ಯೇ ।**

ಈ ದೇವತೆಗಳಿಂದ ಅನುಜ್ಞಾತನಾಗಿ ಪೀಠಪೂಜೆಯನ್ನು ಮಾಡುತ್ತೇನೆ ಎಂಬುದಾಗಿ ಸಂಕಲ್ಪಿಸಬೇಕು.

**ಶ್ವೇತಾಂಬರಧರಾ ಗೌರಾ ಗುರವಃ ಪುಸ್ತಕಾನ್ವಿತಾಃ ।**
**ವ್ಯಾಖ್ಯಾನಮುದ್ರಯಾ ಯುಕ್ತಾ ಧ್ಯಾಯಂತೋ ವೈ ನಿಜಂ ಹರಿಮ್ ॥**

ಪೀಠಪಾದಾಧೋದೇವತಾಃ

ಆಗ್ನೇಯೇ- ಓಂ ಗರುಡಾಯ ನಮಃ, ನೈಋತ್ಯೇ- ಓಂ ವೇದವ್ಯಾಸಾಯ ನಮಃ ।
ವಾಯವ್ಯೇ- ಓಂ ದುರ್ಗಾಯೈ ನಮಃ,ಈಶಾನ್ಯೇ- ಓಂ ಸರಸ್ವತ್ಯೈ ನಮಃ ।

ಪೀಠಪಾದೋರ್ಧ್ವದೇವತಾಃ

ಆಗ್ನೇಯೇ- ಓಂ ಧರ್ಮಾಧಿಪತಯೇ ವೃಷತನವೇ ರಕ್ತವರ್ಣಾಯ ಯಮಾಯ ನಮಃ ।

ನೈಋತ್ಯೇ - ಓಂ ಜ್ಞಾನಾಧಿಪತಯೇ ಸಿಂಹಾಕಾರಾಯ ಶ್ಯಾಮವರ್ಣಾಯ ವಾಯವೇ ನಮಃ ।

ವಾಯವ್ಯೇ - ಓಂ ವೈರಾಗ್ಯಾಧಿಪತಯೇ ಭೂತಾಕಾರಾಯ ಪೀತವರ್ಣಾಯ ಶಿವಾಯ ನಮಃ ।

ಈಶಾನ್ಯೇ - ಓಂ ಐಶ್ವರ್ಯಾಧಿಪತಯೇ ಗಜಾಕಾರಾಯ ಕೃಷ್ಣವರ್ಣಾಯ ಇಂದ್ರಾಯ ನಮಃ ।

ಪೀಠಫಲಕದೇವತಾಃ

ಪೂರ್ವಸ್ಯಾಂ - ಓಂ ಅಧರ್ಮಾಧಿಪತಯೇ ನಿರ್ಋತಯೇ ನಮಃ ।
ದಕ್ಷಿಣಸ್ಯಾಂ - ಓಂ ಅವಿಜ್ಞಾನಾಧಿಪತಯೇ ದುರ್ಗಾಯೈ ನಮಃ ।
ಪ್ರತೀಚ್ಯಾಂ - ಓಂ ಅವೈರಾಗ್ಯಾಧಿಪತಯೇ ಕಾಮಾಯ ನಮಃ ।
ಉದೀಚ್ಯಾಂ - ಓಂ ಅನೈಶ್ವರ್ಯಾಧಿಪತಯೇ ಶಿವಾಯ ನಮಃ ।

ಪೀಠಾಧಸ್ತಾತ್ -ಓಂ ಪರಮಪುರುಷಾಯ ನಮಃ ।
ತದುಪರಿ -ಆಧಾರರೂಪಿಣ್ಯೈ ಶಕ್ತಿನಾಮ್ನ್ಯೈ ರಮಾಯೈ ನಮಃ ।
ತದುಪರಿ -ಬ್ರಹ್ಮಾಂಡಾಧಾರವಿಷ್ಣುಕೂರ್ಮಾಯ ನಮಃ ।
ಅಂಡಾಂತಸ್ಥಾಗಾಧಜಲಾಧಾರವಿಷ್ಣುಕೂರ್ಮಾಯ ನಮಃ ।
ತದುಪರಿ -ತತ್ಪುಚ್ಛಾಶ್ರಿತ ವಾಯುಕೂರ್ಮಾಯ ನಮಃ ।
ತದುಪರಿ -ತತ್ಪುಚ್ಛಾಶ್ರಿತಾನಂತನಾಮಕ- ಶೇಷಾಯ ನಮಃ ।
ತದುಪರಿ -ತತ್ಫಣಾಶ್ರಿತಪೃಥಿವ್ಯಭಿಮಾನಿನ್ಯೈ ಭೂಮ್ಯೈ ನಮಃ ।
ತದುಪರಿ -ಕ್ಷೀರಸಾಗರಾಭಿಮಾನಿನೇ ವರುಣಾಯ ನಮಃ ।
ತದುಪರಿ -ರಮಾರೂಪಶ್ವೇತದ್ವೀಪಾಯ ನಮಃ ।

**ತದುಪರಿ -ಮಹತೇ ದಿವ್ಯರತ್ನಖಚಿತಸುವರ್ಣಮಂಡಪಾಯ ನಮಃ ।**

**ತನ್ಮಧ್ಯೇ -ಕಂದನಾಲಸಹಿತಷಡ್ದಲಪದ್ಮಾತ್ಮಿಕಾಯೈ ಶ್ರಿಯೈ ನಮಃ ।**

**ಪದ್ಮಸ್ಯಾಗ್ರದಲೇಷು**

**ದಕ್ಷಿಣದಲೇ ಅಂ ಸೂರ್ಯಮಂಡಲಾಯ ನಮಃ, ವಾಮದಲೇ ಉಂ ಸೋಮಮಂಡಲಾಯ ನಮಃ, ಸಮ್ಮುಖದಲೇ ಮಂ ಹುತಾಶಮಂಡಲಾಯ ನಮಃ ॥** ಹೀಗೆ ಮೂರು ಮಂಡಲಗಳನ್ನು ನಮಸ್ಕರಿಸಬೇಕು.

**ಪದ್ಮಪೃಷ್ಠದಲೇಷು**

**ವಾಮಭಾಗದಲೇ ಸಂ ಸತ್ವಾಭಿಮಾನಿನ್ಯೈ ಶ್ರಿಯೈ ನಮಃ, ದಕ್ಷಿಣಭಾಗದಲೇ ರಂ ರಜೋಭಿಮಾನಿನ್ಯೈ ಭುವೇ ನಮಃ, ಪೃಷ್ಠಭಾಗದಲೇ ತಂ ತಮೋಭಿಮಾನಿನ್ಯೈ ದುರ್ಗಾಯೈ ನಮಃ ॥** ಹೀಗೆ ಶ್ರೀ-ಭೂ-ದುರ್ಗೆಯರನ್ನು ನಮಸ್ಕರಿಸಬೇಕು.

**ಪೂರ್ವಾದಿದಿಕ್ಷು ಸೋಪಾನದೇವತಾಃ**

**ಪೂರ್ವೇ ಆತ್ಮನೇ ನಮಃ, ದಕ್ಷಿಣೇ ಅಂತರಾತ್ಮನೇ ನಮಃ, ಪಶ್ಚಿಮೇ ಪರಮಾತ್ಮನೇ ನಮಃ, ಉತ್ತರೇ ಜ್ಞಾನಾತ್ಮನೇ ನಮಃ ।** ಈ ಸೋಪಾನದೇವತೆಗಳನ್ನು ನಮಸ್ಕರಿಸಬೇಕು.

**ಷಡ್ದಲಪದ್ಮೇ**

**ಪದ್ಮದಲೇಷು ಸೂರ್ಯಾಯ ನಮಃ, ದ್ವಾವಿಂಶಕೇಶರೇಷು ಸೋಮಾಯ ನಮಃ, ಕರ್ಣಿಕಾಯಾಂ ಅಗ್ನಯೇ ನಮಃ ॥** ಈ ದೇವತೆಗಳನ್ನು ಚಿಂತಿಸಬೇಕು.

**ತದುಪರಿ ಅಷ್ಟದಲಪದ್ಮೇ**

ಆರುದಳದ ಈ ಕಮಲದಲ್ಲಿ ಮತ್ತೆ ಎಂಟುದಳದ ಕಮಲವಿದೆ ಎಂಬುದಾಗಿ ಚಿಂತಿಸಬೇಕು. ಪ್ರತ್ಯೇಕವಾಗಿ ಆ ಅಷ್ಟದಳಗಳಲ್ಲಿ ಈ ದೇವತೆಗಳನ್ನು ಧ್ಯಾನಿಸಬೇಕು.

**ಓಂ ಛತ್ರಧಾರಿಣ್ಯೈ ವಿಮಲಾಯೈನಮಃ, ಓಂ ಚಾಮರಧಾರಿಣ್ಯೈ ಉತ್ಕರ್ಷಿಣ್ಯೈ ನಮಃ, ಓಂ ವ್ಯಜನಧಾರಿಣ್ಯೈ ಜ್ಞಾನಾಯೈ ನಮಃ, ಓಂ ದರ್ಪಣಧಾರಿಣ್ಯೈ ಕ್ರಿಯಾಯೈ ನಮಃ, ಓಂ ಗಾನಕರ್ತ್ರ್ಯೈ ಯೋಗಾಯೈ ನಮಃ, ಓಂ ನೃತ್ಯಂತ್ಯೈ ಪ್ರಹ್ವ್ಯೈ ನಮಃ, ಓಂ ವಾದ್ಯಹಸ್ತಾಯೈ ಸತ್ಯಾಯೈ ನಮಃ, ಓಂ ಸ್ತೋತ್ರಕರ್ತ್ರ್ಯೈ ಈಶಾನಾಯೈ ನಮಃ, ಏತಾಭಿಃ ಕೃತಾಂ ಸೇವಾಂ ಸಮರ್ಪಯಂತ್ಯೈ ಓಂ ಅನುಗ್ರಹಾಯೈ ನಮಃ ।**

ಪದ್ಮದ ಎಂಟು ದಳಗಳಲ್ಲಿ ಮತ್ತು ಪದ್ಮದ ಮಧ್ಯದಲ್ಲಿ ಹೀಗೆ ಒಂಭತ್ತು ಸ್ಥಳಗಳಲ್ಲಿ ವಿಮಲಾದಿ ಒಂಭತ್ತು ರೂಪಗಳನ್ನು ಚಿಂತಿಸಬೇಕು. ಶ್ರೀಹರಿಯ ಸ್ವರೂಪಭೂತವಾದ ವಿಮಲಾದಿರೂಪಗಳಿವೆ. ಹಾಗೆಯೇ ರಮಾಸ್ವರೂಪ ಭೂತವಾದ, ಬ್ರಹ್ಮದೇವರ ಸ್ವರೂಪವಾದ, ವಾಯುಸ್ವರೂಪವಾದ, ಶೇಷಸ್ವರೂಪವಾದ, ಗರುಡಸ್ವರೂಪವಾದ ವಿಮಲಾದಿರೂಪಗಳನ್ನು ಕೂಡಾ ಆ ಸ್ಥಾನಗಳಲ್ಲಿ ಪೂಜಿಸಬೇಕು.

**ಅಷ್ಟದಲಪದ್ಮಕರ್ಣಿಕಾಸ್ಥ ಹುತಾಶನಮಂಡಲೋಪರಿಸ್ಥಾಯಾಃ ಅನುಗ್ರಹಾಯಾಃ ಉಪರಿ ತಮೋಭಿಮಾನಿನ್ಯೈ ದುರ್ಗಾಯೈ ನಮಃ । ರಜೋಮಾನಿನ್ಯೈ ಭುವೇ ನಮಃ । ಸತ್ವಾಭಿಮಾನಿನ್ಯೈ ಶ್ರಿಯೈ ನಮಃ । ತದುಪರಿ**

**ವಿಷ್ಣೋರಾಸನಭೂತಾಯ ದಿವ್ಯರತ್ನಮಯಾಯ ಚ ।**
**ಪ್ರಧಾನಪುರುಷೇಶಾಯ ಮಹಾಪೀಠಾಯ ತೇ ನಮಃ ॥**

**ಕುಂಡಲರೂಪೇಣ ಆಸನಭೂತಾಯ, ಫಣಾರೂಪೇಣ ಉಪಬರ್ಹಣಛತ್ರ-ರೂಪಾಯ, ಹರೇಃ ಯೋಗಪೀಠಸ್ವರೂಪಾಯ ಶ್ರೀಮದನಂತಾಯ ನಮಃ ।**

**ತದುಪರಿ ಸತ್ವಾದ್ಯಾತ್ಮಕರಮಾರೂಪಚಿತ್ರಾಸನಾಯ ನಮಃ, ವಿತಾನದೇವತಾಯೈ ಶ್ರಿಯೈ ನಮಃ, ಕಶಿಪುದೇವತಾಯೈ ಭೂಮ್ಯೈ ನಮಃ, ಉಪಬರ್ಹಣದೇವತಾಯೈ ದುರ್ಗಾಯೈ ನಮಃ । ಇತಿ ಪೀಠದೇವತಾಃ ಸ್ಮೃತ್ವಾ ನಮೇತ್ ॥**

ಈ ರೀತಿಯಾಗಿ ಪೀಠದೇವತೆಗಳನ್ನು ಸ್ಮರಿಸಿ ಅವರನ್ನು ನಮಸ್ಕರಿಸಬೇಕು.

**(ಇತಃ ಪರಂ ವಕ್ಷ್ಯಮಾಣಃ ಹೃತ್ಕಮಲವಿಕಾಸಂ ಆರಭ್ಯ ಬಿಂಬರೂಪಾವಾಹನ ಪರ್ಯಂತಃ ಕ್ರಮಃ ಪ್ರತಿಮಾಪೂಜಾಯಾಂ ಏವ, ನ ತು ಶಾಲಿಗ್ರಾಮ ಪೂಜಾಯಾಂ)**

(ಇನ್ನು ಮುಂದೆ ಹೇಳುವ ಹೃತ್ಕಮಲವಿಕಾಸವನ್ನು ಮೊದಲು ಮಾಡಿ ಬಿಂಬರೂಪಾವಾಹನ ಪರ್ಯಂತವಾದ ಕ್ರಮವು ಪ್ರತಿಮಾಪೂಜೆಯಲ್ಲಿಯೇ ಮಾಡಬೇಕು. ಶಾಲಗ್ರಾಮ ಪೂಜೆಯನ್ನು ಮಾಡುವವರು ಈ ಕ್ರಮವನ್ನು ಅನುಷ್ಠಾನ ಮಾಡಬಾರದು.)

## ಹೃತ್ಕಮಲವಿಕಾಸಃ

**ತತಃ ಅಧೋಮುಖಂ ಹೃತ್ಕಮಲಂ ಓಂ ಯಂ ಓಂ ಇತಿ ವಾಯುಬೀಜೇನ ಅಭಿಮುಖಂ ಕೃತ್ವಾ, ಪ್ರಣವೇನ ಉನ್ಮುಖಂ ಕೃತ್ವಾ, ಜ್ಞಾನಾರ್ಕೇಣ ವಿಕಾಸಯೇತ್। ತತ್ರ ನಾರಾಯಣಂ ಧ್ಯಾಯೇತ್ ॥**

ನಮ್ಮೆಲ್ಲರ ಮನಸ್ಸಿನಲ್ಲಿ ಕಮಲವಿದೆ. ಅದು ಕೆಳಮುಖವಾಗಿದೆ. ಓಂ ಯಂ ಓಂ ಎಂಬ ವಾಯುಬೀಜದ ಜಪದಿಂದ ಆ ಕಮಲವು ನಮಗೆ ಅಭಿಮುಖವಾಗುವಂತೆ ಮಾಡಿಕೊಳ್ಳಬೇಕು. ಪ್ರಣವಜಪದಿಂದ ಆ ಕಮಲವು ಮೇಲ್ಮುಖವಾಗುವಂತೆ ಮಾಡಿಕೊಳ್ಳಬೇಕು. ಜ್ಞಾನವೆಂಬ ಸೂರ್ಯ ಆ ಕಮಲವನ್ನು ಅರಳಿಸಿದ್ದಾನೆ ಎಂಬುದಾಗಿ ಭಾವಿಸಬೇಕು. ಹೀಗೆ ಜ್ಞಾನಸೂರ್ಯನಿಂದ ಅರಳಿದ ಆ ಕಮಲದಲ್ಲಿ ಪರಮಾತ್ಮ ನಾರಾಯಣನನ್ನು ಧ್ಯಾನಿಸಬೇಕು.

## ಬಿಂಬರೂಪಧ್ಯಾನಮ್

**ಉದ್ಯದ್ಭಾಸ್ವತ್ಸಮಾಭಾಸಃ ಚಿದಾನಂದೈಕದೇಹವಾನ್ ।**
**ಶಂಖಚಕ್ರಗದಾಪದ್ಮಧರೋ ಧ್ಯೇಯೋಽಹಮೀಶ್ವರಃ ॥**

**ಲಕ್ಷ್ಮೀಧರಾಭ್ಯಾಮಾಶ್ಲಿಷ್ಟಃ ಸ್ವಮೂರ್ತಿಗಣಮಧ್ಯಗಃ ।**
**ಬ್ರಹ್ಮವಾಯುಶಿವಾಹೀಶವಿಪೈಃ ಶಕ್ರಾದಿಕೈರಪಿ ॥**
**ಸೇವ್ಯಮಾನೋಽಧಿಕಂ ಭಕ್ತ್ಯಾ ನಿತ್ಯನಿಶ್ಶೇಷಶಕ್ತಿಮಾನ್ ॥**

## ಹೃದಯಸ್ಥಭಗವದ್ರೂಪವರ್ಣನಮ್

**ಹೃದಯೇ ಸರ್ವಶೋ ವ್ಯಾಪೀ ಪ್ರಾದೇಶಃ ಪುರುಷೋತ್ತಮಃ ।**
**ಜೀವಾನಾಂ ಸ್ಥಾನಮುದ್ದಿಷ್ಟಃ ಸರ್ವದೈವ ಸನಾತನಃ ॥**

**ಹೃತ್ಕರ್ಣಿಕಾಮೂಲಗತಃ ಸೋಽಂಗುಷ್ಠಾಗ್ರಪ್ರಮಾಣಕಃ ।**
**ಮೂಲೇಶ ಇತಿ ನಾಮಾಸ್ಮಿನ್ ಸರ್ವೇ ಜೀವಾಃ ಪ್ರತಿಷ್ಠಿತಾಃ ॥**

**ಅಂಗುಷ್ಠಮಾತ್ರೇ ಪುರುಷೇ ಕರ್ಣಿಕಾಗ್ರಸ್ಥಿತೇ ಹರೌ ।**
**ಪ್ರವಿಶಂತಿ ಸುಷುಪ್ತೌ ತು ಪ್ರಬುಧ್ಯಂತೇ ತತಸ್ತಥಾ ॥**

**ಸೋಽಯಂ ತ್ರಿರೂಪೋ ಭಗವಾನ್ ಹೃದಯಾಖ್ಯಃ ಪ್ರಕೀರ್ತಿತಃ ।**
**ಹೃದಿಸ್ಥಾ ಯಾ ಹರೇರ್ಮೂರ್ತಿಃ ಜೀವೋ ಯತ್ಪ್ರತಿಬಿಂಬಕಃ ॥**
**ಯದ್ವಶೇ ವರ್ತತೇ ಜೀವಃ ಸಾ ತು ಜೀವಕಲಾ ಸ್ಮೃತಾ ॥**

**ಇತಿ ಬಿಂಬರೂಪಂ ನಾರಾಯಣಂ ಧ್ಯಾಯೇತ್ ॥**

ಈ ಶ್ಲೋಕಗಳನ್ನು ಪಠಿಸುತ್ತಾ ನಮ್ಮ ಬಿಂಬರೂಪಿಯಾದ ನಾರಾಯಣನನ್ನು ಚಿಂತಿಸಬೇಕು.

## ಬಿಂಬರೂಪಾವಾಹನಮ್

**ಆತ್ಮೇತ್ಯಸ್ಯ ವಾತಾಯನ ಋಷಿಃ, ವಾಸುದೇವೋ ದೇವತಾ, ತ್ರಿಷ್ಟುಪ್ ಛಂದಃ, ಸ್ವಬಿಂಬಮೂರ್ತ್ಯಾವಾಹನೇ ವಿನಿಯೋಗಃ ॥**

**ಓಂ ಆತ್ಮಾ ದೇವಾನಾಂ ಭುವನಸ್ಯ ಗರ್ಭೋ ಯಥಾವಶಂ ಚರತಿ ದೇವ ಏಷಃ । ಘೋಷಾ ಇದಸ್ಯ ಶೃಣ್ವಿರೇ ನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ ॥ಋ.ಸಂ.10.168.4॥**

**ಇತಿ ಮನ್ತ್ರಂ, ಮೂಲಮನ್ತ್ರಂ ಸಹಸ್ರಶೀರ್ಷಾ ಇತಿ ಋಚಂ ಚೋಚ್ಚಾರ್ಯ ॥**

ಈ ಮಂತ್ರವನ್ನು, ಓಂ ನಮೋ ನಾರಾಯಣಾಯ ಓಂ ಎಂಬ ಮೂಲಮಂತ್ರವನ್ನು **ಸಹಸ್ರಶೀರ್ಷಾಃ...** ಎಂಬ ಋಕ್ಕನ್ನು ಪಠಿಸಬೇಕು.

**'ಏಹಿ ಏಹಿ ಮಮ ಹೃತ್ಪದ್ಮಗತ ಶ್ರೀಪುರುಷೋತ್ತಮ ಹೃತ್ಕಮಲಸ್ಥಿತ-ಶ್ರೀಮುಖ್ಯಪ್ರಾಣಾಂತರ್ಗತ ಬಿಂಬರೂಪಿನ್ ಶ್ರೀಲಕ್ಷ್ಮೀನಾರಾಯಣ ಪೀಠಸ್ಥಿತೈತತ್ಪ್ರತಿಮಾಂತಃಸ್ಥ ತೇಜಃಸಾರಪ್ರತಿಮಾಂತಃಸ್ಥಿತ ಶ್ರೀಮುಖ್ಯಪ್ರಾಣರೂಪ-ಪ್ರತಿಮಾಂತರ್ಗತ ರಮಾರೂಪಚಿನ್ಮಯಪ್ರತಿಮಾಯಾಂ ನಾರಾಯಣಂ ತ್ವಾಂ ಆವಾಹಯಾಮಿ ಆವಾಹಯಾಮಿ' ಇತಿ ದ್ವಿರುಚ್ಚಾರ್ಯ ಆವಾಹನಮುದ್ರಯಾ ತಮಾವಾಹಯೇತ್ ॥**

ಈ ಗದ್ಯವನ್ನು ಎರಡು ಬಾರಿ ಪಠಿಸುತ್ತಾ ಆವಾಹನ ಮುದ್ರೆಯನ್ನು ತೋರಿಸುತ್ತಾ ಪ್ರತಿಮೆಗಳಲ್ಲಿ ನಾರಾಯಣನನ್ನು ಆವಾಹನ ಮಾಡಬೇಕು.

ತಾನು ಸ್ವಯಂ ಪೂಜೆ ಮಾಡುತ್ತಿದ್ದರೆ ಬಿಂಬಮೂರ್ತಿಯನ್ನು ಪ್ರತಿಮೆಯಲ್ಲಿ ಆವಾಹನ ಮಾಡಬೇಕು. ಯಜಮಾನನ ಪ್ರಾರ್ಥನೆಗೆ ಅನುಗುಣವಾಗಿ ಪೂಜೆಯನ್ನು ಮಾಡುತ್ತಿದ್ದರೆ ಸೂರ್ಯಾಂತರ್ಯಾಮಿಯಾದ ನಾರಾಯಣನನ್ನು **ಧ್ಯೇಯಃ ಸದಾ...** ಎಂಬ ಶ್ಲೋಕದಿಂದ ಆವಾಹನಮಾಡಿ ಪೂಜಿಸಬೇಕು.

**ಸಾನ್ನಿಧ್ಯಂ ಕುರು ದೇವೇಶ ಸರ್ವಸಂಪತ್ಕರೋ ಭವ ।**
**ವಿಭೋ ಸಕಲಲೋಕೇಶ ವಿಷ್ಣೋ ಜಿಷ್ಣೋ ಹರೇ ಪ್ರಭೋ ॥**
**ತ್ವಾಂ ಭಕ್ತ್ಯಾ ಪೂಜಯಾಮ್ಯದ್ಯ ಭೋಗೈರರ್ಘ್ಯಾದಿಭಿಃ ಕ್ರಮಾತ್ ॥**

**ಇತಿ ಪ್ರಾರ್ಥ್ಯ, ತತಃ ಮಾತೃಕಾನ್ಯಾಸಂ ತತ್ತ್ವನ್ಯಾಸಂ ಚ ಪ್ರತಿಮಾಯಾಂ ಕೃತ್ವಾ ಪ್ರತಿಮಾಂ ಸ್ಪೃಷ್ಟ್ವಾ ದ್ವಾದಶವಾರಂ ಮೂಲಮಂತ್ರಂ ಜಪೇತ್ ॥ ತತಃ,**

ಈ ಮಂತ್ರದಿಂದ ಪ್ರಾರ್ಥನ ಮಾಡಬೇಕು. ನಂತರ ಮಾತೃಕಾನ್ಯಾಸ, ತತ್ತ್ವನ್ಯಾಸಗಳನ್ನು ಪ್ರತಿಮೆಯಲ್ಲಿ ಮಾಡಬೇಕು. ಪ್ರತಿಮೆಯನ್ನು ಸ್ಪರ್ಶ ಮಾಡುತ್ತಾ ಹನ್ನೆರಡು ಬಾರಿ ನಾರಾಯಣಮಂತ್ರವನ್ನು ಜಪಿಸಬೇಕು.

**ಯಾಗಾವಸಾನಪರ್ಯಂತಮತ್ರ ಸ್ಥಿತ್ವಾ ಜನಾರ್ದನ ।**
**ಭಕ್ತಸ್ಯ ಮಮ ಪೂಜಾಂ ತ್ವಂ ಗೃಹೀತ್ವಾ ಪಾಹಿ ಮಾಂ ಪ್ರಭೋ ॥**

**ಭೋ ಸ್ವಾಮಿನ್ ಜಗತಾಂ ನಾಥ ಯಾವತ್ಪೂಜಾವಸಾನಕಮ್ ।**
**ತಾವತ್ಸಂಪ್ರೀತಿಭಾವೇನ ಬಿಂಬೇಽಸ್ಮಿನ್ ಸನ್ನಿಧೌ ಭವ ॥**

**ಇತಿ ಪ್ರಾರ್ಥ್ಯ, ಮೂಲಮಂತ್ರೇಣ ಆವಾಹನಂ, ಸ್ಥಾಪನಂ, ಸಾನ್ನಿಧ್ಯಂ, ಸನ್ನಿರೋಧನಂ, ಸಮ್ಮುಖೀಕರಣಂ, ಅವಗುಂಠನಂ ಇತ್ಯೇವಂ ಷಣ್ಮುದ್ರಾಃ ದರ್ಶಯೇತ್ ॥ ತತಃ ಚಕ್ರಾದ್ಯಾಯುಧದೇವತಾಭ್ಯೋ ನಮಃ ಆಭರಣೇಭ್ಯೋ ನಮಃ ಇತಿ ತಾನಿ ವಿಸರ್ಜಯೇತ್ ॥**

ನಂತರ ಈ ಶ್ಲೋಕಗಳಿಂದ ಪರಮಾತ್ಮನನ್ನು ಪ್ರಾರ್ಥಿಸಬೇಕು. ನಾರಾಯಣಮಂತ್ರದಿಂದ ಆವಾಹನ, ಸ್ಥಾಪನ, ಸಾನ್ನಿಧ್ಯ, ಸನ್ನಿರೋಧನ, ಸಮ್ಮುಖೀಕರಣ, ಅವಗುಂಠನ, ಎಂಬ ಆರು ಮುದ್ರೆಗಳನ್ನು ಪ್ರತಿಮೆಗಳಲ್ಲಿ ತೋರಿಸಬೇಕು.

ನಂತರ ಚಕ್ರಾದ್ಯಾಯುಧದೇವತಾಭ್ಯೋ ನಮಃ ಆಭರಣೇಭ್ಯೋ ನಮಃ ಎಂದು ಪ್ರತಿಮೆಗೆ ತೊಡಿಸಿದ ಆಭರಣ-ಆಯುಧಗಳ ಅಭಿಮಾನಿಗಳನ್ನು ನಮಸ್ಕರಿಸಬೇಕು. ಪ್ರಾರ್ಥಿಸಿ ಆ ಎಲ್ಲ ಆಯುಧ-ಆಭರಣಗಳನ್ನು ತೆಗೆಯಬೇಕು.

## ಅಭಿಷೇಕವಿಧಿಃ

**'ಏಹಿ ಶ್ರೀಭಗವನ್ ವಿಷ್ಣೋ ಸ್ನಾನಾರ್ಥಂ ಮಜ್ಜನಾಲಯಮ್'**

**ಇತಿ ಪ್ರಾರ್ಥ್ಯ,** ಸ್ನಾನಾಲಯಕ್ಕೆ ಬರುವಂತೆ ದೇವರನ್ನು ಪ್ರಾರ್ಥಿಸಬೇಕು.

**ಇದಂ ವಿಷ್ಣುರಿತಿ ಮಂತ್ರಸ್ಯ ಕಾಣ್ವೋ ಮೇಧಾತಿಥಿಃ ಋಷಿಃ ವಿಷ್ಣುರ್ದೇವತಾ ಗಾಯತ್ರೀ ಛಂದಃ ಪಾದುಕಾಸಮರ್ಪಣೇ ವಿನಿಯೋಗಃ ।**

**ಇದಂ ವಿಷ್ಣುರ್ವಿ ಚಕ್ರಮೇ ತ್ರೇಧಾ ನಿ ದಧೇ ಪದಂ । ಸಮೂಢಮಸ್ಯ ಪಾಂಸುರೇ ॥ ಋ.ಸಂ.1-22-17॥**

**ಇತಿ ಪಾದುಕೇ ಸಮರ್ಪಯೇತ್ ।**

ಅವನಿಗೆ ಪಾದುಕೆಗಳನ್ನು ಸಮರ್ಪಿಸಬೇಕು.

**ಭದ್ರಂ ಕರ್ಣೇಭಿಃ ಶೃಣುಯಾಮ ದೇವಾ ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ । ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿರ್ವ್ಯಶೇಮ ದೇವಹಿತಂ ಯದಾಯುಃ ॥ಋ.ಸಂ.1.89.8॥**

**ಇತಿ ಮಂತ್ರೇಣ ದೇವಂ ಸ್ನಾನಪೀಠೇ ಸ್ಥಾಪಯೇತ್ ॥**

ನಂತರ ಸ್ನಾನಪೀಠದಲ್ಲಿ ದೇವರ ಪ್ರತಿಮೆಗಳನ್ನು ಸ್ಥಾಪಿಸಬೇಕು.

**ತತೋ ಮೂಲಮಂತ್ರೇಣ ಮೃತ್ತಿಕಾಶೌಚಂ, ಗಂಡೂಷಾನ್, ದಂತಕಾಷ್ಠಂ, ಮುಖಪ್ರಕ್ಷಾಲನಂ ಚೋದ್ದಿಶ್ಯ ಪೃಥಕ್ ಪೃಥಕ್ ಪಾತ್ರೇ ಉದಕಂ ದದ್ಯಾತ್ ।**

ನಂತರ **ಓಂ ನಮೋ ನಾರಾಯಣಾಯ ಓಂ** ಎಂಬ ಮೂಲಮಂತ್ರದಿಂದ ಮೃತ್ತಿಕಾಶೌಚಕ್ಕಾಗಿ, ಗಂಡೂಷಕ್ಕಾಗಿ, ದಂತಕಾಷ್ಠಕ್ಕಾಗಿ, ಮತ್ತು ಮುಖಪ್ರಕ್ಷಾಲನಕ್ಕಾಗಿ ಪ್ರತ್ಯೇಕ ಪಾತ್ರೆಯಲ್ಲಿ ನಾಲ್ಕು ಬಾರಿ ನೀರನ್ನು ಹಾಕಬೇಕು.

ನಂತರ ಮೂಲಮಂತ್ರದಿಂದ ಅರ್ಘ್ಯಾದಿಗಳನ್ನು ನೀಡಬೇಕು.

**ಓಂ ನಮೋ ನಾರಾಯಣಾಯ ಓಂ ಲಕ್ಷ್ಮೀಹಸ್ತೇನ ಇದಂ ತೇ ಅರ್ಘ್ಯಮ್ ।**

ಮೂಲಮಂತ್ರವನ್ನು ಪಠಿಸುತ್ತಾ ದೇವರಿಗೆ ಅರ್ಘ್ಯವನ್ನು ನೀಡಬೇಕು. ಅರ್ಘ್ಯವನ್ನು ಶ್ರೀದೇವಿಯು ನೀಡುತ್ತಿದ್ದಾಳೆಂದು ಚಿಂತಿಸಬೇಕು.

**ಓಂ ನಮೋ ನಾರಾಯಣಾಯ ಓಂ ಸರಸ್ವತೀಹಸ್ತೇನ ಇದಂ ತೇ ಪಾದ್ಯಮ್ ।**

ಪಾದ್ಯವನ್ನು ಸಮರ್ಪಿಸಬೇಕು. ಸರಸ್ವತಿಯು ಈ ಪಾದ್ಯವನ್ನು ನೀಡುತ್ತಿದ್ದಾಳೆಂದು ಚಿಂತಿಸಬೇಕು.

**ಓಂ ನಮೋ ನಾರಾಯಣಾಯ ಓಂ ರತಿಹಸ್ತೇನ ಇದಂ ತೇ ಆಚಮನಮ್ ।**

ಆಚಮನೀಯವನ್ನು ಸಮರ್ಪಿಸಬೇಕು. ರತಿಯು ಆಚಮನವನ್ನು ನೀಡುತ್ತಿದ್ದಾಳೆಂದು ಭಾವಿಸಬೇಕು.

**ಓಂ ನಮೋ ನಾರಾಯಣಾಯ ಓಂ ಬ್ರಹ್ಮಹಸ್ತೇನ ಅಯಂ ತೇ ಮಧುಪರ್ಕಃ ।**

ಮಧುಪರ್ಕವನ್ನು ನೀಡಬೇಕು. ಬ್ರಹ್ಮದೇವರು ಮಧುಪರ್ಕವನ್ನು ಸಮರ್ಪಿಸುತ್ತಿದ್ದಾರೆಂದು ಧೇನಿಸಬೇಕು.

**ಓಂ ನಮೋ ನಾರಾಯಣಾಯ ಓಂ ಶಾಂತಿಹಸ್ತೇನ ಇದಂ ತೇ ಪುನರಾಚಮನಮ್ ।**

ಪುನರಾಚಮನೀಯವನ್ನು ಸಮರ್ಪಿಸಬೇಕು. ಶಾಂತಿಯು ಈ ಉಪಚಾರವನ್ನು ಸಮರ್ಪಿಸುತ್ತಿದ್ದಾಳೆಂದು ಭಾವಿಸಬೇಕು.

**ಓಂ ನಮೋ ನಾರಾಯಣಾಯ ಓಂ ವರುಣಹಸ್ತೇನ ಇದಂ ತೇ ಮಲಾಪಕರ್ಷಸ್ನಾನಮ್ ।**

ಮಲಾಪಕರ್ಷಸ್ನಾನವನ್ನು ಸಮರ್ಪಿಸಬೇಕು. ಇದನ್ನು ವರುಣನು ಸಮರ್ಪಿಸುತ್ತಿದ್ದಾನೆಂದು ತಿಳಿಯಬೇಕು.

## ಪಂಚಾಮೃತಮ್

**ಆಪ್ಯಾಯಸ್ವೇತಿ ಗೋತಮೋ ರಾಹೂಗಣ ಋಷಿಃ, ಸೋಮೋ ದೇವತಾ, ಗಾಯತ್ರೀ ಛಂದಃ, ಪಯಃಸ್ನಪನೇ ವಿನಿಯೋಗಃ ।**

**ಓಂ ಆ ಪ್ಯಾಯಸ್ವ ಸಮೇತು ತೇ ವಿಶ್ವತಃ ಸೋಮ ವೃಷ್ಣ್ಯಮ್ । ಭವಾ ವಾಜಸ್ಯ ಸಂಗಥೇ ॥ ಋಗ್ವೇದ 1-91-16॥**

ಹಾಲಿನಿಂದ ಅಭಿಷೇಕ ಮಾಡಿ ಹಾಲಿನಲ್ಲಿರುವ ಗೋವಿಂದನು ಪ್ರತಿಮೆಯಲ್ಲಿರುವ ಪರಮಾತ್ಮನಿಗೆ ಅಭಿಷೇಕ ಮಾಡುತ್ತಿದ್ದಾನೆಂದು ತಿಳಿಯಬೇಕು. ಹಾಲಿನಿಂದ ಅಭಿಷೇಕ ಮಾಡಿದ ಮೇಲೆ ಶುದ್ಧೋದಕದಿಂದ ಮತ್ತೆ ಸ್ನಾನ ಮಾಡಿಸಬೇಕು.

ವಸ್ತ್ರ, ಆಭರಣ, ಯಜ್ಞೋಪವೀತ, ಆಸನ, ಗಂಧ, ಪುಷ್ಪ-ತುಲಸೀ, ಧೂಪ, ದೀಪ, ನೈವೇದ್ಯ, ನಮಸ್ಕಾರ ಹೀಗೆ ಹತ್ತು ಉಪಚಾರಗಳನ್ನು ಪ್ರತಿ ಅಭಿಷೇಕ ಸಮಯದಲ್ಲಿಯೂ ಸಮರ್ಪಿಸಬೇಕು.

**ದಧಿಕ್ರಾವ್ಣ ಇತ್ಯಸ್ಯ ವಾಮದೇವೋ ಗೌತಮ ಋಷಿಃ, ದಧಿಕ್ರಾಃ ದೇವತಾ ಅನುಷ್ಟುಪ್ ಛಂದಃ ದಧಿಸ್ನಪನೇ ವಿನಿಯೋಗಃ ।**

**ಓಂ ದಧಿಕ್ರಾವ್ಣೋ ಅಕಾರಿಷಂ ಜಿಷ್ಣೋರಶ್ವಸ್ಯ ವಾಜಿನಃ । ಸುರಭಿ ನೋ ಮುಖಾ ಕರತ್ ಪ್ರ ಣ ಆಯೂಂಷಿ ತಾರಿಷತ್ ॥ ಋಗ್ವೇದ 4-39-6॥**

ಈ ಮಂತ್ರವನ್ನು ಪಠಿಸುತ್ತಾ ಮೊಸರಿನಿಂದ ಅಭಿಷೇಕ ಮಾಡಬೇಕು. ಮೊಸರಿನಲ್ಲಿರುವ ವಾಮನ ಪ್ರತಿಮೆಯಲ್ಲಿರುವ ಪರಮಾತ್ಮನನ್ನು ಅಭಿಷೇಕಮಾಡುತ್ತಿದ್ದಾನೆಂದು ಭಾವಿಸಬೇಕು.

**ಘೃತಂ ಮಿಮಿಕ್ಷ ಇತ್ಯಸ್ಯ ಗೃತ್ಸಮದ ಋಷಿಃ, ಸ್ವಾಹಾಕೃತಯಃ ದೇವತಾಃ, ತ್ರಿಷ್ಟುಪ್ ಛಂದಃ ಘೃತಸ್ನಪನೇ ವಿನಿಯೋಗಃ ।**

**ಓಂ ಘೃತಂ ಮಿಮಿಕ್ಷೇ ಘೃತಮಸ್ಯ ಯೋನಿರ್ಘೃತೇ ಶ್ರಿತೋ ಘೃತಮ್ವಸ್ಯ ಧಾಮ । ಅನುಷ್ವಧಮಾ ವಹ ಮಾದಯಸ್ವ ಸ್ವಾಹಾಕೃತಂ ವೃಷಭ ವಕ್ಷಿ ಹವ್ಯಮ್ ॥ ಋಗ್ವೇದ 2-3-11॥**

ಈ ಮಂತ್ರವನ್ನು ಪಠಿಸುತ್ತಾ ತುಪ್ಪದಿಂದ ಅಭಿಷೇಕ ಮಾಡಬೇಕು. ತುಪ್ಪದಲ್ಲಿರುವ ಶ್ರೀಕರ ಪ್ರತಿಮೆಯಲ್ಲಿರುವ ಪರಮಾತ್ಮನನ್ನು ಅಭಿಷೇಕಮಾಡುತ್ತಿದ್ದಾನೆಂದು ಚಿಂತಿಸಬೇಕು.

**ಮಧುವಾತೇತ್ಯಸ್ಯ ಗೋತಮೋ ರಾಹೂಗಣ ಋಷಿಃ, ವಿಶ್ವೇದೇವಾ ದೇವತಾಃ, ಗಾಯತ್ರೀ ಛಂದಃ, ಮಧುಸ್ನಪನೇ ವಿನಿಯೋಗಃ ।**

**ಓಂ ಮಧು ವಾತಾ ಋತಾಯತೇ ಮಧು ಕ್ಷರಂತಿ ಸಿಂಧವಃ । ಮಾಧ್ವೀರ್ನಃ ಸಂತ್ವೋಷಧೀಃ ॥ ಮಧು ನಕ್ತಮುತೋಷಸೋ ಮಧುಮತ್ ಪಾರ್ಥಿವಂ ರಜಃ । ಮಧು ದ್ಯೌರಸ್ತು ನಃ ಪಿತಾ ॥ ಮಧುಮಾನ್ನೋ ವನಸ್ಪತಿರ್ಮಧುಮಾँ ಅಸ್ತು ಸೂರ್ಯಃ । ಮಾಧ್ವೀರ್ಗಾವೋ ಭವಂತು ನಃ ॥ ಋಗ್ವೇದ 1-90-6.7.8॥**

ಈ ಮಂತ್ರವನ್ನು ಪಠಿಸುತ್ತಾ ಜೇನಿನಿಂದ ಅಭಿಷೇಕ ಮಾಡಬೇಕು. ಜೇನಲ್ಲಿರುವ ಮಧುಸೂದನ ಪ್ರತಿಮೆಯಲ್ಲಿರುವ ಪರಮಾತ್ಮನನ್ನು ಅಭಿಷೇಕಮಾಡುತ್ತಿದ್ದಾನೆಂದು ಭಾವಿಸಬೇಕು.

**ಸ್ವಾದುಃ ಪವಸ್ವೇತ್ಯಸ್ಯ ವೇನೋ ಭಾರ್ಗವ ಋಷಿಃ, ವಿಶ್ವೇದೇವಾ ದೇವತಾಃ, ಜಗತೀ ಛಂದಃ ಶರ್ಕರಾಸ್ನಪನೇ ವಿನಿಯೋಗಃ ।**

**ಓಂ ಸ್ವಾದುಃ ಪವಸ್ವ ದಿವ್ಯಾಯ ಜನ್ಮನೇ ಸ್ವಾದುರಿಂದ್ರಾಯ ಸುಹವೀತುನಾಮ್ನೇ । ಸ್ವಾದುರ್ಮಿತ್ರಾಯ ವರುಣಾಯ ವಾಯವೇ ಬೃಹಸ್ಪತಯೇ ಮಧುಮಾँ ಅದಾಭ್ಯಃ ॥ ಋಗ್ವೇದ 9.85.6॥**

ಈ ಮಂತ್ರವನ್ನು ಪಠಿಸುತ್ತಾ ಸಕ್ಕರೆಯಿಂದ ಅಭಿಷೇಕ ಮಾಡಬೇಕು. ಸಕ್ಕರೆಯಲ್ಲಿರುವ ವಿಷ್ಣು ಪ್ರತಿಮೆಯಲ್ಲಿರುವ ಪರಮಾತ್ಮನನ್ನು ಅಭಿಷೇಕಮಾಡುತ್ತಿದ್ದಾನೆಂದು ಧ್ಯಾನ ಮಾಡಬೇಕು.

**ಯಾಃ ಫಲಿನೀರಿತ್ಯಸ್ಯ ಆಥರ್ವಣೋ ಭಿಷಕ್ ಋಷಿಃ, ಓಷಧಯೋ ದೇವತಾಃ, ಅನುಷ್ಟುಪ್ ಛಂದಃ ಫಲಸ್ನಪನೇ ವಿನಿಯೋಗಃ ।**

**ಓಂ ಯಾಃ ಫಲಿನೀರ್ಯಾ ಅಫಲಾ ಅಪುಷ್ಪಾ ಯಾಶ್ಚ ಪುಷ್ಪಿಣೀಃ । ಬೃಹಸ್ಪತಿಪ್ರಸೂತಾಸ್ತಾ ನೋ ಮುಂಚಂತ್ವಂಹಸಃ ॥ಋಗ್ವೇದ 10.97.15॥**

ಈ ಮಂತ್ರವನ್ನು ಪಠಿಸುತ್ತಾ ಹಣ್ಣುಗಳಿಂದ ಅಭಿಷೇಕ ಮಾಡಬೇಕು. ಹಣ್ಣುಗಳಲ್ಲಿರುವ ಭಗವಂತ ಪ್ರತಿಮೆಯಲ್ಲಿರುವ ಪರಮಾತ್ಮನನ್ನು ಅಭಿಷೇಕಮಾಡುತ್ತಿದ್ದಾನೆಂದು ಭಾವಿಸಬೇಕು.

## ಶುದ್ಧಾಭಿಷೇಕಃ

ಶುದ್ಧಾಭಿಷೇಕ ಮಾಡುವಾಗ ಘಂಟಾನಾದವನ್ನು ಮಾಡಬೇಕು. ಶುದ್ಧಾಭಿಷೇಕವನ್ನು ಶಂಖದಿಂದಲೇ ಮಾಡಬೇಕು. ಶುದ್ಧಾಭಿಷೇಕ ಮಾಡುವಾಗ ಪುರುಷಸೂಕ್ತವನ್ನು ಪಠಿಸಬೇಕು. ಅವಕಾಶವಿರುವಾಗ ವಿಷ್ಣುಸೂಕ್ತ-ಘರ್ಮಸೂಕ್ತ-ಪವಮಾನ-ಸಮುದ್ರಸೂಕ್ತ-ಘರ್ಮಸೂಕ್ತ-ಜಿತಂತೇಸ್ತೋತ್ರ-ಬ್ರಹ್ಮಸೂತ್ರ-ಅಷ್ಟಮಹಾಮಂತ್ರಗಳನ್ನೂ ಅಭಿಷೇಕಸಮಯದಲ್ಲಿ ಯಥಾವಕಾಶ ಪಠಿಸಬೇಕು. ಉದ್ಧರಿಣಿಯಿಂದ ಜಲವನ್ನು ಶಂಖದಲ್ಲಿ ಹಾಕಿಕೊಂಡು ಅಭಿಷೇಕ ಮಾಡಬೇಕು.

ಶುದ್ಧಾಭಿಷೇಕವಾದ ನಂತರ ಪೂರ್ಣಕುಂಭವನ್ನು ಎತ್ತಿ ಆ ಕುಂಭದಿಂದಲೇ **ಓಂ ಅಂ ಅಜಾಯ ನಮಃ** ಮೊದಲು ಮಾಡಿ **ಓಂ ಶಿಂ ಶಿಂಶುಮಾರಾಯ ನಮಃ** ಇತ್ಯಂತವಾಗಿ ಮಂತ್ರಗಳನ್ನು ಪಠಿಸುತ್ತಾ ಪೂರ್ಣಕುಂಭಾಭಿಷೇಕವನ್ನು ಮಾಡಬೇಕು.

ಮೂಲಮಂತ್ರವನ್ನು ಜಪಿಸುತ್ತಾ ವಸ್ತ್ರದಿಂದ ಪ್ರತಿಮೆಗಳನ್ನು ಒರಿಸಿ ಶಾಲಗ್ರಾಮ-ಚಕ್ರಾಂಕಿತಗಳನ್ನು ತಟ್ಟೆಯಲ್ಲಿ ಇಟ್ಟುಕೊಳ್ಳಬೇಕು.

**ಯುವಂ ವಸ್ತ್ರಾಣೀತ್ಯಸ್ಯ ದೀರ್ಘತಮಾ ಔಚಥ್ಯ ಋಷಿಃ, ಮಿತ್ರಾವರುಣೌ ದೇವತೇ ತ್ರಿಷ್ಟುಪ್ ಛಂದಃ ವಸ್ತ್ರಸಮರ್ಪಣೇ ವಿನಿಯೋಗಃ ।**

**ಓಂ ಯುವಂ ವಸ್ತ್ರಾಣಿ ಪೀವಸಾ ವಸಾಥೇ ಯುವೋರಚ್ಛಿದ್ರಾ ಮಂತವೋ ಹ ಸರ್ಗಾಃ । ಅವಾತಿರತಮನೃತಾನಿ ವಿಶ್ವ ಋತೇನ ಮಿತ್ರಾವರುಣಾ ಸಚೇಥೇ ॥ಋ.ಸಂ.1.152.1॥**

**ಇತಿ ವಸ್ತ್ರಂ ಸಮರ್ಪ್ಯ**, ಈ ಮಂತ್ರವನ್ನು ಪಠಿಸುತ್ತಾ ವಸ್ತ್ರವನ್ನು ಸಮರ್ಪಿಸಬೇಕು.

**ಅನೇಕರತ್ನಸಂಯುಕ್ತಾ ತುಲಸೀದಲಮಿಶ್ರಿತಾ ।**
**ವಿಷ್ಣುವಕ್ಷಃಸ್ಥಲೇ ಮಾಲಾ ವೈಜಯಂತೀತ್ಯುದಾಹೃತಾ ॥**

**ಇತಿ ಮಂತ್ರೇಣ ಲಕ್ಷ್ಮ್ಯಭಿಮನ್ಯಮಾನಾಂ ವೈಜಯಂತೀಮಾಲಾಂ ಸಮರ್ಪಯೇತ್ ।**

ಈ ಮಂತ್ರವನ್ನು ಪಠಿಸುತ್ತಾ ಲಕ್ಷ್ಮೀದೇವಿಯಿಂದ ಅಭಿಮನ್ಯಮಾನವಾದ ವೈಜಯಂತೀ ಮಾಲೆಯನ್ನು ದೇವರಿಗೆ ಮಾನಸಿಕವಾಗಿ ಸಮರ್ಪಿಸಬೇಕು. ವೈಜಯಂತೀ ಮಾಲೆಯ ಪ್ರತಿನಿಧಿಯಾಗಿ ತುಲಸೀದಲವನ್ನು ಸಮರ್ಪಿಸಬೇಕು.

**ದೇದೀಪ್ಯಮಾನಚಂದ್ರಾರ್ಕಕೋಟಿಕಾಂತಿಸಮಪ್ರಭಃ ।**
**ವಿಷ್ಣೋರ್ವಕ್ಷಃಸ್ಥಲೇ ಭಾಸ್ವತ್ಕೌಸ್ತುಭಸ್ಸಮುದಾಹೃತಃ ॥**

**ಇತಿ ಮಂತ್ರೇಣ ಬ್ರಹ್ಮಾಭಿಮನ್ಯಮಾನಂ ಕೌಸ್ತುಭಂ ಸಮರ್ಪಯೇತ್ ।**

ಈ ಮಂತ್ರವನ್ನು ಪಠಿಸುತ್ತಾ ಬ್ರಹ್ಮದೇವರಿಂದ ಅಭಿಮನ್ಯಮಾನವಾದ ಕೌಸ್ತುಭವನ್ನು ಸಮರ್ಪಿಸಬೇಕು.

**ಮೂಲಮಂತ್ರೇಣ ಶ್ರೀವತ್ಸಂ ಚೂಡಾಮಣಿಂ ಚ ದದ್ಯಾತ್ ।**

ಮೂಲಮಂತ್ರವನ್ನು ಪಠಿಸುತ್ತಾ ಶ್ರೀವತ್ಸವನ್ನು, ಚೂಡಾಮಣಿಯನ್ನು ಸಮರ್ಪಿಸಬೇಕು.

**ಯಜ್ಞೋಪವೀತಮಿತಿ ಮಂತ್ರಸ್ಯ ಪರಬ್ರಹ್ಮಾ ಪರಮಾತ್ಮಾ ತ್ರಿಷ್ಟುಪ್ ಯಜ್ಞೋಪವೀತಸಮರ್ಪಣೇ ವಿನಿಯೋಗಃ ।**

**ಯಜ್ಞೋಪವೀತಂ ಪರಮಂ ಪವಿತ್ರಂ**
**ಪ್ರಜಾಪತೇಃ ಯತ್ಸಹಜಂ ಪುರಸ್ತಾತ್ ।**
**ಆಯುಷ್ಯಮಗ್ರ್ಯಂ ಪ್ರತಿಮುಂಚ ಶುಭ್ರಂ**
**ಯಜ್ಞೋಪವೀತಂ ಬಲಮಸ್ತು ತೇಜಃ ॥**

**ಇತಿ ಮಂತ್ರೇಣ ಯಜ್ಞೋಪವೀತಂ ಸಮರ್ಪಯೇತ್ ।**

ಈ ಮಂತ್ರದಿಂದ ಯಜ್ಞೋಪವೀತವನ್ನು ಸಮರ್ಪಿಸಬೇಕು.

**ಅತ್ರ ಸರ್ವತ್ರ ಯಥೋಕ್ತದ್ರವ್ಯಾಲಾಭೇ ತುಲಸೀದಲೈರೇವ ತತ್ತದಾಭರಣಾನು-ಸಂಧಾನಪೂರ್ವಕಂ ಸರ್ವಾನುಪಚಾರಾನ್ ಸಮರ್ಪಯೇದಿತಿ ಜ್ಞೇಯಮ್ ।**

ವೈಜಯಂತೀ ಮುಂತಾದ ಆಭರಣಗಳು ದುರ್ಲಭವಾಗಿವೆ. ಹೀಗಾಗಿ ಅವುಗಳ ಪ್ರತಿನಿಧಿಯಾಗಿ ತುಲಸೀದಲಗಳನ್ನು ಸಮರ್ಪಿಸುವ ಮೂಲಕ ಆಯಾ ಮಂತ್ರಗಳನ್ನು ಪಠಿಸುತ್ತಲೇ ಎಲ್ಲ ಉಪಚಾರಗಳನ್ನೂ ಸಮರ್ಪಿಸಬೇಕು.

## ಗಂಧಸಮರ್ಪಣೆ

ಒಣಗಿದ ಗಂಧವನ್ನು ದೇವರಿಗೆ ಏರಿಸಬಾರದು. ದ್ರವರೂಪವಾದ ಗಂಧವನ್ನೂ ದೇವರಿಗೆ ಸಮರ್ಪಿಸಬಾರದು. ಗಂಧದ ಉಂಡೆಗಳನ್ನು ಮಾಡಿಟ್ಟುಕೊಂಡು ಹಸಿಯಾದ ಆ ಗಂಧದ ಉಂಡೆಗಳನ್ನೇ ದೇವರಿಗೆ ಸಮರ್ಪಿಸಬೇಕು. ತುಲಸೀರಹಿತವಾಗಿ ಗಂಧವನ್ನು ಏರಿಸಬಾರದು. ಹಸಿಯಾದ ಗಂಧದ ಉಂಡೆಯನ್ನು ಶಂಖಕ್ಕೆ ಸ್ಪರ್ಶಮಾಡಿ ತುಲಸೀಸಹಿತವಾಗಿಯೇ ದೇವರಿಗೆ ಸಮರ್ಪಿಸಬೇಕು.

ಸಾಲಿಗ್ರಾಮಾದಿಗಳನ್ನು ಮುಟ್ಟುತ್ತಲೇ ಪ್ರತ್ಯೇಕ-ಪ್ರತ್ಯೇಕವಾಗಿಯೇ ಗಂಧವನ್ನು ಸಮರ್ಪಿಸಬೇಕು. ಪ್ರತಿಬಾರಿಯೂ ಕೈಯನ್ನು ತೊಳೆದುಕೊಳ್ಳಬೇಕು. ಹೀಗೆಯೇ ಹೂಮಾಲೆ-ಧೂಪ-ದೀಪಮಾಲಾ-ನೀರಾಜನಗಳನ್ನು ಸಮರ್ಪಿಸುವಾಗಲೂ ಮಧ್ಯ-ಮಧ್ಯದಲ್ಲಿ ಕೈಯನ್ನು ತೊಳೆದುಕೊಂಡೇ ಉಪಚಾರಗಳನ್ನು ಸಮರ್ಪಿಸಬೇಕು.

ಗಂಧವನ್ನು ಸಮರ್ಪಿಸುವಾಗ **ಗಂಧದ್ವಾರಾಂ...** ಎಂಬ ಮಂತ್ರವನ್ನು **ಶ್ರೀಖಂಡಂ...** ಎಂಬ ಶ್ಲೋಕವನ್ನು ಪಠಿಸಬೇಕು.

**ಗಂಧದ್ವಾರಾಮಿತ್ಯಸ್ಯ ಆನಂದ-ಕರ್ದಮ-ಶ್ರೀದ-ಚಿಕ್ಲೀತಾ ಋಷಯಃ, ಶ್ರೀಃ ದೇವತಾ, ಅನುಷ್ಟುಪ್ ಛಂದಃ ಗಂಧಸಮರ್ಪಣೇ ವಿನಿಯೋಗಃ ।**

**ಗಂಧದ್ವಾರಾಂ ದುರಾಧರ್ಷಾಂ ನಿತ್ಯಪುಷ್ಟಾಂ ಕರೀಷಿಣೀಮ್ ।**
**ಈಶ್ವರೀಂ ಸರ್ವಭೂತಾನಾಂ ತಾಮಿಹೋಪ ಹ್ವಯೇ ಶ್ರಿಯಮ್**

**॥ಋ.ಖಿಲ॥**

**ಶ್ರೀಖಂಡಂ ಚಂದನಂ ದಿವ್ಯನಾನಾಗಂಧಮನೋಹರಮ್ ।**
**ವಿಲೇಪನಂ ಸುರಶ್ರೇಷ್ಠ ಪ್ರೀತ್ಯರ್ಥಂ ಪ್ರತಿಗೃಹ್ಯತಾಮ್ ॥**

## ತುಲಸೀ-ಪುಷ್ಪ

ತುಲಸಿ ಇಲ್ಲದೇ ದೇವರ ಪೂಜೆಯನ್ನು ಸರ್ವಥಾ ಮಾಡಬಾರದು. ತುಲಸಿ ಇಲ್ಲದೇ ಇರುವಾಗ ತುಲಸಿಯ ಎಲೆಗಳಿಂದ, ಕಾಷ್ಠಗಳಿಂದ, ಬೇರಿನಿಂದ, ಮೃತ್ತಿಕೆಯಿಂದ ಕೊನೆಗೆ ತುಲಸಿ ತುಲಸಿ ಎಂಬ ನಾಮವನ್ನಾದರೂ ಉಚ್ಚರಿಸುತ್ತಾ ದೇವರ ಅರ್ಚನೆ ಮಾಡಬೇಕು. ತುಲಸಿಯು ನಿರ್ಮಾಲ್ಯವಾಗಿದ್ದರೂ ದೇವರಿಗೆ ಸಮರ್ಪಿಸಬಹುದು. ಆದರೆ ಅದನ್ನು ಶುದ್ಧೋದಕದಿಂದ ಪ್ರಕ್ಷಾಲನ ಮಾಡಿಯೇ ಏರಿಸಬೇಕು. ನಿರ್ಮಾಲ್ಯವಲ್ಲದ ತುಲಸಿಯನ್ನು ಪ್ರಕ್ಷಾಲನ ಮಾಡಬಾರದು. ಹಾಗೆಯೇ ಹೂಗಳನ್ನು ಪ್ರಕ್ಷಾಲನ ಮಾಡಿಯೇ ದೇವರಿಗೆ ಸಮರ್ಪಿಸಬೇಕು.

ಹೂಗಳು ಸಿಗದಿದ್ದಾಗ ಆಯಾ ಹೂಗಿಡಗಳ ಎಲೆಗಳಿಂದಲೂ ದೇವರನ್ನು ಅರ್ಚಿಸಬಹುದು. ಅದೇರೀತಿಯಾಗಿ ದೂರ್ವಾ-ಬಿಲ್ವಪತ್ರಗಳಿಂದಲೂ ದೇವರನ್ನು ಅರ್ಚಿಸಬೇಕು.

**ಮಾಲ್ಯಾದೀನಿ ಸುಗಂಧೀನಿ ಮಾಲತ್ಯಾದೀನಿ ವೈ ಪ್ರಭೋ ।**
**ಮಯಾಹೃತಾನಿ ಪೂಜಾರ್ಥಂ ಪುಷ್ಪಾಣಿ ಪ್ರತಿಗೃಹ್ಯತಾಮ್ ॥**

ನಂತರ ತುಲಸಿಯನ್ನು, ಹೂಗಳನ್ನು, ಹೂಮಾಲೆಗಳನ್ನು ದೂರ್ವಾವನ್ನು ಕೇಶವಾದಿನಾಮ, ಮತ್ಸ್ಯಾದಿನಾಮಗಳಿಂದ ಮತ್ತು ನಾರಾಯಣಾದ್ಯಷ್ಟೋತ್ತರ-ಶತನಾಮಗಳಿಂದ ವಿಶ್ವಾದಿಸಹಸ್ರನಾಮಗಳಿಂದ ಸಮರ್ಪಿಸಬೇಕು. ಈ ಸಮಯದಲ್ಲಿ ಆಯುಧಾವರಣದೇವತೆಗಳನ್ನು ಪೂಜಿಸಬೇಕು.

## ಧೂಪ-ದೀಪ

**ವನಸ್ಪತ್ಯುದ್ಭವೋ ದಿವ್ಯೋ ಗಂಧಾಢ್ಯೋ ಗಂಧ ಉತ್ತಮಃ ।**
**ಆಘ್ರೇಯಸ್ಸರ್ವದೇವಾನಾಂ ಧೂಪೋಽಯಂ ಪ್ರತಿಗೃಹ್ಯತಾಮ್ ॥**

**ಇತಿ ಘಂಟಾನಾದಪೂರ್ವಕಂ ಧೂಪಂ ವ್ಯಜನೇನ ವೀಜಯಿತ್ವಾ ॥**

ಈ ಮಂತ್ರವನ್ನು ಪಠಿಸುತ್ತಾ ಘಂಟೆಯನ್ನು ಬಾರಿಸುತ್ತಾ ಬೀಸಣಿಕೆಯಿಂದ ಧೂಪವನ್ನು ಬೀಸುತ್ತಾ ದೇವರಿಗೆ ಸಮರ್ಪಿಸಬೇಕು.

**ಸಾಜ್ಯಂ ತ್ರಿವರ್ತಿಸಂಯುಕ್ತಂ ವಹ್ನಿನಾ ಯೋಜಿತಂ ಮಯಾ ।**
**ದೀಪಂ ಗೃಹಾಣ ದೇವೇಶ ತ್ರೈಲೋಕ್ಯತಿಮಿರಾಪಹ ॥**

**ಇತಿ ತ್ರಿವರ್ತ್ಯುಪೇತಂ ದೀಪಂ ಸಾರ್ಧತ್ರಿವಾರಂ ಭ್ರಾಮಿತಂ ದತ್ವಾ ಏತಂ ದೀಪಂ ಸ್ವಯಂ ಶಾಮಯೇತ್ ॥**

ನಂತರ ಮೂರು ಬತ್ತಿಗಳಿಂದ ಯುಕ್ತವಾದ ದೀಪವನ್ನು ಮೂರು ಬಾರಿ ಪೂರ್ಣವಾಗಿ ತಿರುಗಿಸಿ ನಂತರ ಅರ್ಧದವರೆಗೆ ತಂದು ಆ ದೀಪವನ್ನು ಶಾಂತಮಾಡಬೇಕು.

## ನೈವೇದ್ಯವಿಧಿಃ

ದೇವರ ಎದುರಿಗೆ ಭೂಮಿಯನ್ನು ಶುದ್ಧಮಾಡಿಕೊಳ್ಳಬೇಕು. ಚತುರಸ್ರ-ಮಂಡಲವನ್ನು ಮಾಡಬೇಕು. ಅಲ್ಲಿ ಶ್ರೀಬೀಜವನ್ನು ಬರೆಯಬೇಕು. ಅದರ ಮೇಲೆ ಎಲೆಯಲ್ಲಿ ಅನ್ನ-ಪಾಯಸ ಮುಂತಾದವುಗಳನ್ನು ಬಡಿಸಬೇಕು. ಬಡಿಸಿದ ಪ್ರತಿಯೊಂದು ಆಹಾರಪದಾರ್ಥದ ಮೇಲೆ ತುಲಸೀದಳಗಳನ್ನು ಹಾಕಬೇಕು. ಶುದ್ಧವಾದ ಜಲವನ್ನು ಕೈಯಲ್ಲಿ ತೆಗೆದುಕೊಳ್ಳಬೇಕು. ಎಂಟು ಬಾರಿ ನಾರಾಯಣಮಂತ್ರದಿಂದ ಅಭಿಮಂತ್ರಿಸಬೇಕು. ಆ ನೀರಿನಿಂದ ನೈವೇದ್ಯವನ್ನು ಪ್ರೋಕ್ಷಣ ಮಾಡಬೇಕು. ನಂತರ ನೈವೇದ್ಯವನ್ನು ಮುಟ್ಟಬೇಕು.

**ಸೌವರ್ಣೈಃ ಸ್ಥಾಲಿವರ್ಯೈರ್ಮಣಿಗಣ-**
**ಖಚಿತೈಃ ಗೋಘೃತಾಕ್ತಾನ್ ಸುಪಕ್ವಾನ್**
**ಭಕ್ಷ್ಯಾನ್ಭೋಜ್ಯಾಂಶ್ಚ ಲೇಹ್ಯಾನಪಿ**
**ಪರಮಮಹಚ್ಚೋಷ್ಯಮನ್ನಂ ನಿಧಾಯ ॥**

**ನಾನಾಶಾಕೈರುಪೇತಂ ದಧಿ ಮಧು**
**ಸುಘೃತಂ ಕ್ಷೀರಪಾನೀಯಯುಕ್ತಂ**

**ತಾಂಬೂಲಂ ಚಾಪಿ ವಿಷ್ಣೋಃ**
**ಪ್ರತಿದಿವಸಮಹಂ ಮಾನಸೇ ಚಿಂತಯಾಮಿ ॥**

**ಇತಿ ಮಂತ್ರೇಣ ಚ ಅಭಿಮಂತ್ರಯೇತ್ ॥**

ಈ ಶ್ಲೋಕಗಳನ್ನು ಪಠಿಸುತ್ತಾ ಅನ್ನವನ್ನು ಅಭಿಮಂತ್ರಿಸಬೇಕು.

**ಸರ್ವಕಾಮದುಘೇ ದೇವಿ ಸರ್ವತೀರ್ಥಾಭಿಷೇಚಿನಿ ।**
**ಪಾವನೇ ಸುರಭಿಶ್ರೇಷ್ಠೇ ದೇವಿ ತುಭ್ಯಂ ನಮೋಽಸ್ತು ತೇ ॥**

**ಇತಿ ಮಂತ್ರೇಣ ಅಮೃತೀಕರಣಾರ್ಥಂ ಧೇನುಮುದ್ರಾಮ್ ॥**

ಈ ಶ್ಲೋಕದಿಂದ ಅನ್ನ ಅಮೃತವಾಗುವಂತೆ ಪ್ರಾರ್ಥಿಸುತ್ತಾ ಧೇನುಮುದ್ರೆಯನ್ನು ತೋರಿಸಬೇಕು.

**ಓಂ ನಮೋ ಭಗವತೇ ಪಾಂಚಜನ್ಯಾಯ ಮಹಾಶಂಖಾಯ ಸರ್ವಪಾತಾಲವಾಸಿನಾಂ ವಿಕ್ಷೋಭಕಾಯ ಹುಂ ಫಟ್ ಸ್ವಾಹಾ ॥**

**ಇತಿ ಮಂತ್ರೇಣ ಪವಿತ್ರೀಕರಣಾರ್ಥಂ ಶಂಖಮುದ್ರಾಂ,**

ಈ ಮಂತ್ರದಿಂದ ಅನ್ನ ಪವಿತ್ರವಾಗಲು ಶಂಖಮುದ್ರೆಯನ್ನು ತೋರಿಸಬೇಕು.

**ಓಂ ನಮಃ ಸುದರ್ಶನಾಯ ಮಹಾಚಕ್ರಾಯ ಹುಂ ಫಟ್ ಸ್ವಾಹಾ ॥**

**ಇತಿ ಮಂತ್ರೇಣ ಸಂರಕ್ಷಣಾರ್ಥಂ ಚಕ್ರಮುದ್ರಾಂ,**

ಈ ಮಂತ್ರದಿಂದ ಅನ್ನ ಸಂರಕ್ಷಣೆಗಾಗಿ ಚಕ್ರಮುದ್ರೆಯನ್ನು ತೋರಿಸಬೇಕು.

**ಓಂ ನಮೋ ಭಗವತ್ಯೈ ಗದಾಯೈ ಭಾವರೂಪಿಣ್ಯೈ ಕೌಮೋದಿಕ್ಯೈ ಹುಂ ಫಟ್ ಸ್ವಾಹಾ ಇತಿ ಮಂತ್ರೇಣ ದಿಗ್ಬಂಧನಾರ್ಥಂ ಗದಾಮುದ್ರಾಂ**

**ಅನ್ನಸ್ಯ ವಿಪುಲತ್ವಾಯ ಮೇರುಮುದ್ರಾಂ, ಶೀತಲತ್ವಾಯ ಚಂದ್ರಮುದ್ರಾಂ ಚ ಪ್ರದರ್ಶಯೇತ್ ॥**

ಅನ್ನ ಬಹಳವಾಗಬೇಕೆಂಬ ಭಾವನೆಯಿಂದ ಮೇರುಮುದ್ರೆಯನ್ನು ಪ್ರದರ್ಶಿಸಬೇಕು. ಶೀತಲವಾಗಬೇಕೆಂದು ಚಂದ್ರಮುದ್ರೆಯನ್ನು ತೋರಿಸಬೇಕು.

**ಪರಿವೇಷಯತೀಶಂ ಶ್ರೀಃ ಮುಖ್ಯಪ್ರಾಣಸ್ತು ವೀಜಯೇತ್ ।**
**ಭಾರತ್ಯಾದ್ಯಾಃ ಪರಿಚರಂತ್ಯೋ ಜಯಾದ್ಯಾ ದ್ವಾರಪಾಲಕಾಃ ॥**
**ಇತಿ ಸ್ಮರೇತ್**

ಲಕ್ಷ್ಮೀದೇವಿಯು ದೇವರಿಗೆ ಬಡಿಸುತ್ತಿದ್ದಾಳೆಂದು ಚಿಂತಿಸಬೇಕು. ಮುಖ್ಯಪ್ರಾಣದೇವರು ಗಾಳಿಯನ್ನು ಹಾಕುತ್ತಿದ್ದಾರೆಂದು ಭಾವಿಸಬೇಕು. ಭಾರತ್ಯಾದಿ ದೇವತೆಗಳು ದೇವರನ್ನು ಪರಿಚರಿಸುತ್ತಿದ್ದಾರೆಂದು ತಿಳಿಯಬೇಕು. ಜಯಾದಿಗಳು ದ್ವಾರಪಾಲಕರಾಗಿ ಸೇವಿಸುತ್ತಿದ್ದಾರೆಂದು ಅನುಸಂಧಾನ ಮಾಡಬೇಕು. ಹೀಗೆ ದೇವರ ನೈವೇದ್ಯವನ್ನು ಸ್ಮರಿಸಿಕೊಳ್ಳಬೇಕು.

**ಕರೇ ಜಲಂ ಗೃಹೀತ್ವಾ 'ಸತ್ಯಂ ತ್ವರ್ತೇನ ಪರಿಷಿಂಚಾಮಿ' ಇತಿ ಜಲೇನ ನೈವೇದ್ಯಂ ಪರಿಷಿಂಚೇತ್ ।**

ಕೈಯಲ್ಲಿ ಶುದ್ಧವಾದ ನೀರನ್ನು ತೆಗೆದುಕೊಂಡು **ಸತ್ಯಂ...** ಎಂಬ ಮಂತ್ರವನ್ನು ಉಚ್ಚರಿಸುತ್ತಾ ನೀರಿನಿಂದ ನೈವೇದ್ಯದ ಸುತ್ತಲೂ ಪರಿಷೇಚನ ಮಾಡಬೇಕು.

**ಮಹಾಲಕ್ಷ್ಮ್ಯಾಃ ಸುಧಾರೂಪಂ ಕರೇ ತೇ ದಕ್ಷಿಣೇಽನಘ ।**
**ಆಪೋಶನಂ ದೀಯಮಾನಂ ಪಿಬ ದೇವ ರಮಾಪತೇ ॥**

**ಸುಧಾರಸಂ ಸುವಿಪುಲಂ ಆಪೋಶನಮಿದಂ ತವ ।**
**ಗೃಹಾಣ ತ್ವಂ ಸುರಶ್ರೇಷ್ಠ ಯಥೇಷ್ಟಮುಪಭುಜ್ಯತಾಮ್ ॥**

**ಇತಿ 'ಅಮೃತೋಪಸ್ತರಣಮಸಿ ಸ್ವಾಹಾ' ಇತಿ ಪಾತ್ರಾಂತರೇ ಜಲಂ ನಿಕ್ಷಿಪೇತ್ ।**

ಅನಂತರ **ಅಮೃತೋಪಸ್ತರಣಮಸಿ ಸ್ವಾಹಾ** ಎಂಬ ಮಂತ್ರವನ್ನು ಪಠಿಸುತ್ತಾ ಮತ್ತೊಂದು ಪಾತ್ರೆಯಲ್ಲಿ ನೀರನ್ನು ಹಾಕಬೇಕು.

**ಓಂ ಪ್ರಾಣಾತ್ಮನೇ ಶ್ರೀನಾರಾಯಣಾಯ ಸ್ವಾಹಾ । ಓಂ ಅಪಾನಾತ್ಮನೇ ಶ್ರೀವಾಸುದೇವಾಯ ಸ್ವಾಹಾ । ಓಂ ವ್ಯಾನಾತ್ಮನೇ ಶ್ರೀಸಂಕರ್ಷಣಾಯ ಸ್ವಾಹಾ । ಓಂ ಉದಾನಾತ್ಮನೇ ಶ್ರೀಪ್ರದ್ಯುಮ್ನಾಯ ಸ್ವಾಹಾ । ಓಂ ಸಮಾನಾತ್ಮನೇ ಶ್ರೀಅನಿರುದ್ಧಾಯ ಸ್ವಾಹಾ ।**

**ಇತಿ ಉಚ್ಚರನ್ ಪ್ರತ್ಯಾಹುತಿ ಶಂಖೋದಕಂ ಪಾತ್ರೇ ಕ್ಷಿಪೇತ್ ।**

ಮೇಲೆ ಉಕ್ತವಾದ ಮಂತ್ರಗಳನ್ನು ಪಠಿಸುತ್ತಾ ಶಂಖದಿಂದ ಜಲವನ್ನು ಪಾತ್ರೆಯಲ್ಲಿ ಹಾಕಬೇಕು.

ಅದ್ಯ ತಿಷ್ಠತಿ ಯತ್ಕಿಂಚಿತ್ ಕಲ್ಪಿತಂ ಚಾಪರಂ ಗೃಹೇ ।
ಪಕ್ವಮನ್ನಂ ಸಪಾನೀಯಂ ಸರ್ವೋಪಸ್ಕರಸಂಯುತಮ್ ॥

ಯಥಾಕಾಲಂ ಮನುಷ್ಯಾದ್ಯೈಃ ಭೋಕ್ಷ್ಯಮಾಣಂ ಶರೀರಿಭಿಃ ।
ತತ್ಸರ್ವಂ ವಿಷ್ಣುಪೂಜಾಸ್ತು ಪ್ರೀಯತಾಂ ಮೇ ಜನಾರ್ದನಃ ॥

ಶ್ರೀನಿವಾಸ ನಮಸ್ತುಭ್ಯಂ ಮಹಾನೈವೇದ್ಯಮುತ್ತಮಮ್ ।
ನಿತ್ಯತೃಪ್ತ ಗೃಹಾಣೇದಂ ಕೃಪಯಾ ಭಕ್ತವತ್ಸಲ ॥

ಭಗವನ್ ಶ್ರೀಪತೇ ನ್ಯಸ್ತಂ ನೈವೇದ್ಯಂ ತ್ವತ್ಪುರೋ ಮಯಾ ।
ಕಪಿಲಾತ್ಮಕದಿವ್ಯೇನ ಚಕ್ಷುಷಾ ತ್ವವಲೋಕಯ ॥

ನೃಸಿಂಹಾತ್ಮಕದಿವ್ಯೇನ ದಿವ್ಯಘ್ರಾಣೇಂದ್ರಿಯೇಣ ವೈ ।
ತದ್ವಸ್ತುನಿಷ್ಠಂ ಗಂಧಂ ಚ ದಿವ್ಯಮಾಘ್ರಾಯ ಚಿನ್ಮಯ ॥

ಭೃಗುರಾಮಸ್ವರೂಪೇಣ ದಿವ್ಯವಾಗಿಂದ್ರಿಯೇಣ ವೈ ।
ಸಾಂತ್ವಯ ಶ್ಲಕ್ಷ್ಣಯಾ ವಾಚಾ ಭಕ್ತಂ ಮಾಮನುಕಂಪಯ ॥

ಕೃತ್ವಾ ಪವಿತ್ರಂ ಪೂತಂ ಚ ತತ್ತತ್ಸ್ವಾದುರಸೈರ್ಯುತಮ್ ।
ಮಹಾಕೂರ್ಮಸ್ವರೂಪೇಣ ದಿವ್ಯಜಿಹ್ವೇಂದ್ರಿಯೇಣ ವೈ ॥

ಆಸ್ವಾದಯ ಸ್ವಾದು ರಮ್ಯಂ ಭುಂಕ್ಷ್ವ ದೇವ ರಮಾಪತೇ ।
ಅಗಣಯ್ಯಾಪರಾಧಾನ್ ಮೇ ಪ್ರಸಾದಂ ಕುರು ಕೇಶವ ॥

ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ ।
ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನಃ ॥

ಸ್ವತಂತ್ರ ನಿರ್ದೋಷ ಗುಣಪೂರ್ಣ ಜ್ಞೇಯ ವಿಮುಕ್ತಿದ ।
ನಿಃಸ್ಪೃಹೇಶ್ವರ ಸರ್ವೇಶ ಶುಭಸಾರಭುಗವ್ಯಯ ॥

**ಅಪ್ರಮೇಯ ರಮಾಬ್ರಹ್ಮರುದ್ರೇಂದ್ರಾದಿನಮಸ್ಕೃತ ।**
**ಸತ್ಯಸಂಕಲ್ಪ ಕಾರುಣ್ಯನಿಧೇ ನಿತ್ಯ ನಿರಾಮಯ ।**
**ಭಕ್ತವತ್ಸಲ ಪಾಹೀತಿ ಪ್ರಾರ್ಥ್ಯ ದೇವೇಶ್ವರಂ ಹರಿಮ್ ॥**

**ನಾರಾಯಣ ತ್ವತ್ಸ್ವರೂಪಾನ್ ರಸಾನ್ ಲಕ್ಷ್ಮ್ಯಾತ್ಮಕಾನ್ ರಸಾನ್ ।**
**ಭುಂಕ್ಷ್ವಾಽಥೋ ಪ್ರಾಕೃತಾನ್ ದೃಷ್ಟ್ವಾ ಶುದ್ಧೀಕುರು ಜಗತ್ಪತೇ ॥**

**ಇತಿ ವದೇತ್ ।** ನೈವೇದ್ಯಕಾಲದಲ್ಲಿ ಈ ಶ್ಲೋಕಗಳನ್ನು ಪಠಿಸಬೇಕು.

ನೈವೇದ್ಯವನ್ನು ಸಮರ್ಪಿಸುತ್ತಿರುವವನ ಹೃದಯದಲ್ಲಿರುವ, ಭೋಗಮಾಡುವ ಸಾಲಿಗ್ರಾಮದಲ್ಲಿರುವ, ಭೋಜ್ಯವಾದ ನೈವೇದ್ಯದಲ್ಲಿರುವ ಭಗವಂತನಿಗೆ ಐಕ್ಯವನ್ನು ಚಿಂತಿಸಬೇಕು.

**ಗಂಗೋದಕಂ ಸಮಾನೀತಂ ಹೇಮಕುಂಭೇನ ನಿರ್ಮಲಮ್ ।**
**ಗೃಹ್ಯತಾಂ ಮೇ ಹೃಷೀಕೇಶ ಪ್ರಸೀದ ಪುರುಷೋತ್ತಮ ॥**

**ಇತಿ ಮಂತ್ರೇಣ ಮಧ್ಯೇ ಪಾನೀಯಂ ಸಮರ್ಪ್ಯ,** ಈ ಮಂತ್ರವನ್ನು ಪಠಿಸುತ್ತಾ ಮಧ್ಯದಲ್ಲಿ ಪಾನೀಯವನ್ನು ದೇವರಿಗೆ ಸಮರ್ಪಿಸಬೇಕು.

**ಜವನಿಕಾಂ ಕ್ಷಿಪ್ತ್ವಾ ಭುಂಜಾನಂ ಭಗವಂತಂ ಚಿಂತಯನ್ ಮೂಲಮಂತ್ರಂ ಅಷ್ಟೋತ್ತರಶತವಾರಂ ಜಪೇತ್ । (ತತಃ ಅನುಯಾಗಂ ಕುರ್ಯಾತ್)**

ನೈವೇದ್ಯದ ಕಾಲದಲ್ಲಿ ತೆರೆಯನ್ನು ಹಾಕಬೇಕು. ಭಗವಂತ ಭೋಜನ ಮಾಡುತ್ತಿದ್ದಾನೆ ಎಂಬುದಾಗಿ ಚಿಂತಿಸುತ್ತಾ ನಾರಾಯಣಮಂತ್ರವನ್ನು ನೂರ ಎಂಟು ಬಾರಿ ಜಪಿಸಬೇಕು. (ನಂತರ ಅನುಯಾಗವನ್ನು ಮಾಡಬೇಕು.)

**ಮಹಾಲಕ್ಷ್ಮ್ಯಾ ದೀಯಮಾನಂ ಕರೇ ತೇ ದಕ್ಷಿಣೇಽನಘ ।**
**ಉತ್ತರಾಪೋಶನಂ ದಿವ್ಯಂ ಪಿಬ ದೇವ ರಮಾಪತೇ ॥**

**ತತಃ 'ಅಮೃತಾಪಿಧಾನಮಸಿ ಸ್ವಾಹಾ' ಇತಿ ಉತ್ತರಾಪೋಶನಂ ದತ್ವಾ, ಹಸ್ತಪ್ರಕ್ಷಾಲನಾರ್ಥಂ ದ್ವಾದಶಗಂಡೂಷಾರ್ಥಂ ಜಲಂ ದದ್ಯಾತ್ । ತಾಂಬೂಲಂ, ಹಿರಣ್ಯಪುಷ್ಪದಕ್ಷಿಣಾಂ ಚ ಸಮರ್ಪಯೇತ್ । ತತಃ ನೀರಾಜನಾನಿ (ಮಂಗಲಾರತೀಃ) ಕುರ್ಯಾತ್ ।**

ಲಕ್ಷ್ಮೀದೇವಿಯೇ ಉತ್ತರಾಪೋಷನವನ್ನು ನೀಡುತ್ತಿದ್ದಾಳೆಂದು ಚಿಂತಿಸುತ್ತಾ **ಅಮೃತಾಪಿಧಾನಮಸಿ ಸ್ವಾಹಾ** ಎಂಬ ಮಂತ್ರವನ್ನು ಪಠಿಸುತ್ತಾ ಉತ್ತರಾಪೋಷನವನ್ನು ಸಮರ್ಪಿಸಬೇಕು.

ನಂತರ ಕೈ ತೊಳೆಯುವುದಕ್ಕಾಗಿ ಮತ್ತು ಹನ್ನೆರಡು ಬಾರಿ ಗಂಡೂಷ ಮಾಡುವುದಕ್ಕಾಗಿ ಮೂಲಮಂತ್ರದಿಂದ ನೀರನ್ನು ಸಮರ್ಪಿಸಬೇಕು. ತಾಂಬೂಲ, ಹಿರಣ್ಯಪುಷ್ಪ-ದಕ್ಷಿಣೆಯನ್ನು ಸಮರ್ಪಿಸಬೇಕು. ನಂತರ ಮಂಗಳಾರತಿಗಳನ್ನು ಯಥೇಚ್ಛವಾಗಿ ಮಾಡಬೇಕು.

ಏಕಾದಶಿಯಂದು ಕೇವಲ ಹಣ್ಣು, ಜೇನುತುಪ್ಪ, ಹಾಲು, ಮೊಸರು ಇತ್ಯಾದಿಗಳನ್ನು ದೇವರಿಗೆ ಸಮರ್ಪಿಸಬೇಕು. ಅನ್ನವನ್ನು ಸರ್ವಥಾ ಸಮರ್ಪಿಸಬಾರದು. ಏಕಾದಶಿಯ ದಿವಸ ಫಲ ಸಮರ್ಪಿಸುವಾಗ ಈ ಮಂತ್ರಗಳನ್ನು ಹೇಳಬೇಕು. ಸೌವರ್ಣೈಃ... ಇತ್ಯಾದಿ ಮಂತ್ರಗಳನ್ನು ಹೇಳಕೂಡದು.

**ಪೂರ್ಣಾನಂದಮಹೋದಧೇ ಪ್ರಿಯತಮಾ ಭಲ್ಲಾತಕೀ ದಾಡಿಮಾ**
**ಚೂತೋದಾರಿಕನಾರಿಕೇಲಬದರೀ ಮುಖ್ಯೇ ತ್ವದೀಯೇ ದಿನೇ ।**
**ಖರ್ಜೂರಂ ಕದಲೀ ರಸಾಲಪನಸಂ ದ್ರಾಕ್ಷಾಕಪಿತ್ಥಾದಿಕಂ**
**ಸರ್ವಂ ಸ್ವಾದ್ವಮೃತೋಪಮಂ ನವನವಂ ಸಂಗೃಹ್ಯತಾಮಚ್ಯುತ ॥**

## ಮಹಾನೀರಾಜನಮ್

**ಓಂ ಅರ್ಚತ ಪ್ರಾರ್ಚತ ಪ್ರಿಯಮೇಧಾಸೋ ಅರ್ಚತ । ಅರ್ಚಂತು ಪುತ್ರಕಾ ಉತ ಪುರಂ ನ ಧೃಷ್ಣ್ವರ್ಚತ ॥ ಋಗ್ವೇದ 8-69-8 ॥**

**ಓಂ ನಿ ಷು ಸೀದ ಗಣಪತೇ ಗಣೇಷು ತ್ವಾಮಾಹುರ್ವಿಪ್ರತಮಂ ಕವೀನಾಮ್ । ನ ಋತೇ ತ್ವತ್ ಕ್ರಿಯತೇ ಕಿಂ ಚನಾರೇ ಮಹಾಮರ್ಕಂ ಮಘವಞ್ಚಿತ್ರಮರ್ಚ ॥ ಋಗ್ವೇದ 10-112-9 ॥**

ಓಂ ವಯಃ ಸುಪರ್ಣಾ ಉಪ ಸೇದುರಿಂದ್ರಂ ಪ್ರಿಯಮೇಧಾ ಋಷಯೋ ನಾಧಮಾನಾಃ । ಅಪ ಧ್ವಾಂತಮೂರ್ಣುಹಿ ಪೂರ್ಧಿ ಚಕ್ಷುರ್ಮುಮುಗ್ಧ್ಯ೧ಸ್ಮಾನ್ ನಿಧಯೇವ ಬದ್ಧಾನ್ ॥ ಋಗ್ವೇದ 10-73-11॥

ಓಂ ಶ್ರಿಯೇ ಜಾತಃ ಶ್ರಿಯ ಆ ನಿರಿಯಾಯ ಶ್ರಿಯಂ ವಯೋ ಜರಿತೃಭ್ಯೋ ದಧಾತಿ । ಶ್ರಿಯಂ ವಸಾನಾ ಅಮೃತತ್ವಮಾಯನ್ ಭವಂತಿ ಸತ್ಯಾ ಸಮಿಥಾ ಮಿತದ್ರೌ ॥ ಋಗ್ವೇದ 9-94-4 ॥

ಶ್ರಿಯ ಏವೈನಂ ತಚ್ಛ್ರಿಯಮಾದಧಾತಿ ಸಂತತಮೃಚಾ ವಷಟ್ಕೃತ್ಯಂ ಸಂತತ್ಯೈ ಸಂಧೀಯತೇ ಪ್ರಜಯಾ ಪಶುಭಿರ್ಯ ಏವಂ ವೇದ ॥

ವೈದಿಕವಾದ ಈ ಮಂತ್ರಗಳನ್ನು ಪಠಿಸಬೇಕು.

ಜಯತ್ಯಜೋಽಖಂಡಗುಣೋರುಮಂಡಲಃ
ಸದೋದಿತೋ ಜ್ಞಾನಮರೀಚಿಮಾಲೀ ।
ಸ್ವಭಕ್ತಹಾರ್ದೋಚ್ಚತಮೋನಿಹಂತಾ
ವ್ಯಾಸಾವತಾರೋ ಹರಿರಾತ್ಮಭಾಸ್ಕರಃ ॥

ಜಯತ್ಯಜೋಽಕ್ಷೀಣಸುಖಾತ್ಮಬಿಂಬಃ
ಸ್ವೈಶ್ವರ್ಯಕಾಂತಿಪ್ರತತಃ ಸದೋದಿತಃ ।
ಸ್ವಭಕ್ತಸಂತಾಪದುರಿಷ್ಟಹಂತಾ
ರಾಮಾವತಾರೋ ಹರಿರೀಶಚಂದ್ರಮಾಃ ॥

ಜಯತ್ಯಸಂಖ್ಯೋರುಬಲಾಂಬುಪೂರೋ
ಗುಣೋಚ್ಚರತ್ನಾಕರ ಆತ್ಮವೈಭವಃ ।
ಸದಾ ಸದಾತ್ಮಜ್ಞನದೀಭಿರಾಪ್ಯಃ
ಕೃಷ್ಣಾವತಾರೋ ಹರಿರೇಕಸಾಗರಃ ॥

## ಮಂತ್ರಪುಷ್ಪಮ್

ಓಂ ನಮೋ ಮಹದ್ಭ್ಯೋ ನಮೋ ಅರ್ಭಕೇಭ್ಯೋ ನಮೋ ಯುವಭ್ಯೋ ನಮ ಆಶಿನೇಭ್ಯಃ । ಯಜಾಮ ದೇವಾನ್ ಯದಿ ಶಕ್ನವಾಮ ಮಾ ಜ್ಯಾಯಸಃ ಶಂಸಮಾ ವೃಕ್ಷಿ ದೇವಾಃ ॥ ಋಗ್ವೇದ 1-27-13॥

ಓಂ ಮಮತ್ತು ನಃ ಪರಿಜ್ಮಾ ವಸರ್ಹಾ ಮಮತ್ತು ವಾತೋ ಅಪಾಂ ವೃಷಣ್ವಾನ್ । ಶಿಶೀತಮಿಂದ್ರಾಪರ್ವತಾ ಯುವಂ ನಸ್ತನ್ನೋ ವಿಶ್ವೇ ವರಿವಸ್ಯಂತು ದೇವಾಃ ॥ ಋಗ್ವೇದ 1-122-3 ॥

ಓಂ ಕಥಾ ತೇ ಅಗ್ನೇ ಶುಚಯಂತ ಆಯೋರ್ದದಾಶುರ್ವಾಜೇ-ಭಿರಾಶುಷಾಣಾಃ । ಉಭೇ ಯತ್ ತೋಕೇ ತನಯೇ ದಧಾನಾ ಋತಸ್ಯ ಸಾಮನ್ ರಣಯಂತ ದೇವಾಃ ॥ ಋಗ್ವೇದ 1-147-1॥

ಓಂ ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥ ಋಗ್ವೇದ 10-90-16

ಓಂ ರಾಜಾಧಿರಾಜಾಯ ಪ್ರಸಹ್ಯಸಾಹಿನೇ । ನಮೋ ವಯಂ ವೈಶ್ರವಣಾಯ ಕುರ್ಮಹೇ । ಸ ಮೇ ಕಾಮಾನ್ ಕಾಮಕಾಮಾಯ ಮಹ್ಯಮ್ । ಕಾಮೇಶ್ವರೋ ವೈಶ್ರವಣೋ ದದಾತು । ಕುಬೇರಾಯ ವೈಶ್ರವಣಾಯ । ಮಹಾರಾಜಾಯ ನಮಃ ॥ ತೈತ್ತಿರೀಯ ಆರಣ್ಯಕ 1-31-6॥

**ಸಾಮ್ರಾಜ್ಯಂ ಭೌಜ್ಯಂ ಸ್ವಾರಾಜ್ಯಂ ವೈರಾಜ್ಯಂ ಪಾರಮೇಷ್ಠ್ಯಂ ರಾಜ್ಯಂ ಮಹಾರಾಜ್ಯಂ ಅಯಂ ಸಮಂತಪರ್ಯಾಯೀ ಸ್ಯಾತ್ ಸಾರ್ವಭೌಮಃ ಸಾರ್ವಾಯುಷಃ ಆಂತಾತ್ ಆಪರಾರ್ಧಾತ್ ಪೃಥಿವ್ಯೈ ಸಮುದ್ರಪರ್ಯಂತಾಯಾ ಏಕರಾಳಿತಿ ॥ ಐತರೇಯಬ್ರಾಹ್ಮಣ 8-4-(15) 1॥**

**ತದಪ್ಯೇಷ ಶ್ಲೋಕೋಽಭಿಗೀತಃ । ಮರುತಃ ಪರಿವೇಷ್ಟಾರೋ ಮರುತ್ತಸ್ಯಾವಸನ್ ಗೃಹೇ । ಆವಿಕ್ಷಿತಸ್ಯ ಕಾಮಪ್ರೇಃ ವಿಶ್ವೇ ದೇವಾಃ ಸಭಾಸದ ಇತಿ ॥ ಐತರೇಯಬ್ರಾಹ್ಮಣ 8-4-(21) 7 ॥**

**ಇತಿ ಮಂತ್ರಪುಷ್ಪಂ, ತ್ರಿವಾರಂ ಪುಷ್ಪಾಂಜಲಿಂ ಚ ಸಮರ್ಪಯೇತ್ ।**

**ರಾಜಾಧಿರಾಜಾಯ...** ಎಂಬ ಮಂತ್ರಗಳಿಂದ ಮಂತ್ರಪುಷ್ಪವನ್ನು ಸಮರ್ಪಿಸಬೇಕು. ಮೂರು ಬಾರಿ ಪುಷ್ಪಾಂಜಲಿಯನ್ನು ಕೂಡಾ ಸಮರ್ಪಿಸಬೇಕು.

**ತತೋ ಮೂಲಮಂತ್ರೇಣ ಚಾಮರಂ, ದರ್ಪಣಂ, ಛತ್ರಂ, ವಾಹನಾದಿ, ಗೀತ, ವಾದಿತ್ರ, ನೃತ್ಯಕಾದಿ ಸರ್ವರಾಜೋಪಚಾರಾನ್ ಸಮರ್ಪಯೇತ್ ।**

ನಂತರ ಮೂಲಮಂತ್ರದಿಂದ ಚಾಮರಾದಿ ಸಕಲರಾಜೋಪಚಾರಗಳನ್ನು ಭಗವಂತನಿಗೆ ಸಮರ್ಪಿಸಬೇಕು. ಗೀತ-ವಾದ್ಯಗಳು ಇಲ್ಲದಿರುವಾಗ ವಿಷ್ಣುಸಹಸ್ರನಾಮ, ಗೀತಾ, ಅನುಸ್ಮೃತಿ, ಭೀಷ್ಮಸ್ತವರಾಜ, ಗಜೇಂದ್ರಮೋಕ್ಷ ಈ ಐದು ಸ್ತೋತ್ರಗಳನ್ನು ಪಠಿಸಬೇಕು.

**ಶಂಖಂ ಶುದ್ಧತೋಯೇನ ಪೂರಯಿತ್ವಾ,**

ಶಂಖವನ್ನು ಶುದ್ಧವಾದ ನೀರಿನಿಂದ ತುಂಬಬೇಕು. ಶಂಖಾಗ್ರದಲ್ಲಿ ಶಂಖಮುದ್ರೆಯನ್ನು, ಶಂಖಮಧ್ಯದಲ್ಲಿ ಧೇನುಮುದ್ರೆಯನ್ನು, ಶಂಖಪೃಷ್ಠದಲ್ಲಿ ಚಕ್ರಮುದ್ರೆಯನ್ನು ತೋರಿಸಬೇಕು. ಮೂಲಮಂತ್ರದಿಂದ ಎಂಟುಬಾರಿ ಅಭಿಮಂತ್ರಿಸಬೇಕು.

**ದುಷ್ಟರಾಕ್ಷಸಪೈಶಾಚಪ್ರಮುಖಾನಾಂ ಹರಿದ್ರುಹಾಂ ದೃಷ್ಟಿವಿನಾಶಾಯ ಶಂಖಭ್ರಮಣಂ ಕರಿಷ್ಯೇ ।** ಎಂಬುದಾಗಿ ಸಂಕಲ್ಪಿಸಬೇಕು.

**ಇಮಾ ಆಪಃ ಶಿವತಮಾಃ ಶುಭಾಃ ಶೀತಲಾಃ ಸಂತು ಪೂತಾಃ ಸೂರ್ಯಸ್ಯ ರಶ್ಮಿಭಿಃ ॥**

**ಇತಿ ಮಂತ್ರೇಣ ದೇವಸ್ಯ ಪಾದಾದಿಮುಕುಟಪರ್ಯಂತಮೇಕವಾರಂ, ನಾಭ್ಯಾದಿಮುಕುಟಪರ್ಯಂತಂ ದ್ವಿತೀಯವಾರಂ, ತಥಾ ಹೃದಯಾದಿಮುಕುಟ-ಪರ್ಯಂತಂ ತೃತೀಯವಾರಂ ಪ್ರಾದಕ್ಷಿಣ್ಯೇನ ಭ್ರಾಮಯಿತ್ವಾ ತದುದಕಂ ಪಾತ್ರಾಂತರೇ ನಿಕ್ಷಿಪ್ಯ ಪುನರ್ನೀರಾಜನಂ ಕುರ್ಯಾತ್ ।**

**ಇಮಾ ಆಪಃ...** ಎಂಬ ಮಂತ್ರವನ್ನು ಪಠಿಸುತ್ತಾ ಶಂಖಭ್ರಮಣವನ್ನು ಮಾಡಬೇಕು. ಪಾದ ಮೊದಲುಮಾಡಿ ಕಿರೀಟದ ವರೆಗೆ ಒಂದುಬಾರಿ, ನಾಭಿಯಿಂದ ಕಿರೀಟದ ತನಕ ಎರಡನೆಯ ಬಾರಿ, ಹೃದಯದಿಂದ ಕಿರೀಟದ ತನಕ ಮೂರನೆಯ ಬಾರಿ ಹೀಗೆ ಮೂರು ಬಾರಿ ಪ್ರದಕ್ಷಿಣೆಯ ಕ್ರಮದಲ್ಲಿಯೇ ತಿರುಗಿಸಬೇಕು. ಆ ನೀರನ್ನು ಮತ್ತೊಂದು ಪಾತ್ರೆಯಲ್ಲಿ ಹಾಕಿಕೊಳ್ಳಬೇಕು. ತೀರ್ಥತೆಗೆದುಕೊಳ್ಳುವುದಕ್ಕೂ ಮುಂಚಿತವಾಗಿ ಈ ಶಂಖೋದಕದಿಂದ ಪ್ರೋಕ್ಷಣೆ ಮಾಡಿಕೊಳ್ಳಬೇಕು. ನಂತರ ಮತ್ತೆ ಮಂಗಳಾರತಿಯನ್ನು ಮಾಡಬೇಕು.

(ಇಷ್ಟಾದ ಮೇಲೆ ರಮಾದಿಗಳ ಅಭಿಷೇಕವನ್ನು ಕೆಲವರು ಮಾಡುತ್ತಾರೆ.)

## ರಮಾದಿನೈವೇದ್ಯಮ್

**ತದನಂತರಂ ರಮಾವಾಯ್ವಾದೀನಾಂ ವಿಷ್ಣುಪಾದೋದಕಂ ತ್ರಿಃ ಸಮರ್ಪ್ಯ, ನಿರ್ಮಾಲ್ಯಗಂಧತುಲಸೀಪುಷ್ಪಾಣಿ ಸಮರ್ಪ್ಯ, ವಿಶಿಷ್ಯ ರಮಾಯೈ ಹರಿದ್ರಾಕುಂಕುಮೇ ಸಮರ್ಪಯೇತ್ ।**

ನಂತರ ರಮಾವಾಯ್ವಾದಿದೇವತೆಗಳಿಗೆ ಮೂರು ಬಾರಿ ತೀರ್ಥವನ್ನು ನೀಡಬೇಕು. ನಿರ್ಮಾಲ್ಯವಾದ ಗಂಧ-ತುಲಸೀ-ಪುಷ್ಪಗಳನ್ನು ರಮಾದಿ ದೇವತೆಗಳಿಗೆ ಸಮರ್ಪಿಸಬೇಕು. ರಮಾದೇವಿಗೆ ವಿಶೇಷವಾಗಿ ಅರಿಷಿಣ-ಕುಂಕುಮಗಳನ್ನು ಸಮರ್ಪಿಸಬೇಕು.

**ರಮಾಬ್ರಹ್ಮಾದಯೋ ದೇವಾಃ ಸನಕಾದ್ಯಾಃ ಶುಕಾದಯಃ ।**
**ಶ್ರೀನೃಸಿಂಹಪ್ರಸಾದೋಽಯಂ ಸರ್ವೇ ಗೃಹ್ಣಂತು ವೈಷ್ಣವಾಃ ॥**

**ಇತಿ ರಮಾದಿನೈವೇದ್ಯಂ ಕುರ್ಯಾತ್ ।**

ಈ ಮಂತ್ರವನ್ನು ಪಠಿಸುತ್ತಾ ರಮಾದಿದೇವತೆಗಳಿಗೆ ನೈವೇದ್ಯವನ್ನು ಮಾಡಬೇಕು.

ನೈವೇದ್ಯದ ವಿಷಯದಲ್ಲಿ ಹೀಗೆ ತಿಳಿಯಬೇಕು. ದೇವರಿಗೆ ಮಾತ್ರ ನಿವೇದಿಸಿದ ಅನ್ನವನ್ನು ವೈಶ್ವದೇವಕ್ಕಾಗಿ ಇಟ್ಟುಕೊಳ್ಳಬೇಕು. ರಮಾದಿದೇವತೆಗಳಿಗೆ ಸಮರ್ಪಿಸಿದ ಅನ್ನವನ್ನು ವೈಶ್ವದೇವಕ್ಕಾಗಿ ಉಪಯೋಗಿಸಕೂಡದು. ವೈಶ್ವದೇವದ ಅನ್ನವನ್ನು ತೀರ್ಥದಿಂದ ಪ್ರೋಕ್ಷಣೆ ಮಾಡಬಾರದು. ಆದ್ದರಿಂದ ದೇವರ ನೈವೇದ್ಯವಾದ ಕೂಡಲೇ ರಮಾದಿದೇವತೆಗಳಿಗೆ ನೈವೇದ್ಯ ಮಾಡುವುದಕ್ಕಿಂತಲೂ ಮೊದಲೇ ಸ್ವಲ್ಪ ಅನ್ನವನ್ನು ವೈಶ್ವದೇವಕ್ಕಾಗಿ ಪ್ರತ್ಯೇಕಿಸಿಕೊಳ್ಳಬೇಕು. ಉಳಿದ ಅನ್ನ ಮುಂತಾದ ಎಲ್ಲ ಅಡಿಗೆಯನ್ನು ರಮಾದೇವಿಗೆ ಮತ್ತು ವಾಯುದೇವರಿಗೆ ಕ್ರಮವಾಗಿ ಸಮರ್ಪಿಸಬೇಕು.

ರಮಾ-ವಾಯುಗಳಿಗೆ ನಿವೇದಿತವಾದ ಅನ್ನಾದಿಪದಾರ್ಥಗಳಿಂದ ಸ್ವಲ್ಪ ಸ್ವಲ್ಪ ಭಾಗವನ್ನು ಪ್ರತ್ಯೇಕವಾಗಿ ತೆಗೆದು ಶೇಷಾದಿಗಳಿಗೆ ಸನಕಾದಿಗಳಿಗೆ ನಿವೇದಿಸಬೇಕು. ರಮಾ-ವಾಯುಗಳಿಗೆ ನಿವೇದಿತವಾದ ಆಹಾರವನ್ನು ಮಾತ್ರ ನಾವು ಆಹಾರರೂಪವಾಗಿ ಸ್ವೀಕರಿಸಬೇಕು. ಶೇಷಾದಿಗಳಿಗೆ ನಿವೇದಿಸಿದ ಅನ್ನಾದಿಗಳನ್ನು ಸ್ವೀಕರಿಸಬಾರದು. ಅದನ್ನು ಜಲ-ಅಗ್ನಿ-ಶುದ್ಧಸ್ಥಳಗಳಲ್ಲಿ ವಿಸರ್ಜಿಸಬೇಕು.

## ಪ್ರಾರ್ಥನಾ, ಪ್ರದಕ್ಷಿಣ-ನಮಸ್ಕಾರಾಃ

**ಚತಸೃಭ್ಯಃ ಅಧಿಕಾಃ ಪ್ರದಕ್ಷಿಣಾಃ, ಪಂಚಾಧಿಕಾನ್ ನಮಸ್ಕಾರಾನ್ ಕುರ್ಯಾತ್**

ನಂತರ ಭಕ್ತಿಯಿಂದ ಪರಮಾತ್ಮನನ್ನು ಸ್ತುತಿಸುತ್ತಾ ಪ್ರದಕ್ಷಿಣ- ನಮಸ್ಕಾರಗಳನ್ನು ಮಾಡಬೇಕು. ನಾಲ್ಕಕ್ಕಿಂತಲೂ ಹೆಚ್ಚಾಗಿಯೇ ಪ್ರದಕ್ಷಿಣೆಗಳನ್ನು ಮಾಡಬೇಕು. ಅದಕ್ಕಿಂತಲೂ ಕಡಿಮೆ ಪ್ರದಕ್ಷಿಣೆಗಳನ್ನು ಮಾಡಬಾರದು. ಅದೇ ರೀತಿಯಾಗಿ ಐದು ನಮಸ್ಕಾರಗಳಿಗಿಂತಲೂ ಅಧಿಕವಾಗಿಯೇ ನಮಸ್ಕಾರಗಳನ್ನು ಮಾಡಬೇಕು. ಅದಕ್ಕಿಂತಲೂ ಕಡಿಮೆ ನಮಸ್ಕಾರಗಳನ್ನು ಮಾಡಬಾರದು. ಹೀಗೆ ಪ್ರದಕ್ಷಿಣೆ-ನಮಸ್ಕಾರಗಳನ್ನು ಮಾಡಬೇಕು.

**ತತೋ ವೇದಿಕಾಮಾರುಹ್ಯ, ಪೂಜಾಸಾದ್ಗುಣ್ಯಸಿದ್ಧ್ಯರ್ಥಂ ಅಷ್ಟೋತ್ತರಶತಂ ಮೂಲಮಂತ್ರಂ ಜಪ್ತ್ವಾ, ಪುನಃ ಪ್ರತಿಮಾಯಾಂ ತತ್ತ್ವನ್ಯಾಸ-ಮಾತೃಕಾನ್ಯಾಸೌ ಸಮಾಚರೇತ್ ।**

ನಂತರ ವೇದಿಕೆಯನ್ನು ಏರಬೇಕು. ಪೂಜೆಯು ಪರಿಪೂರ್ಣವಾಗಬೇಕೆಂಬ ಉದ್ದೇಶದಿಂದ ನಾರಾಯಣಮಂತ್ರವನ್ನು ನೂರ ಎಂಟು ಬಾರಿ ಜಪಿಸಬೇಕು. ಪ್ರತಿಮೆಯಲ್ಲಿ ತತ್ತ್ವನ್ಯಾಸ-ಮಾತೃಕಾನ್ಯಾಸಗಳನ್ನು ಮಾಡಬೇಕು. **ಓಂ ಕೃದ್ಧೋಲ್ಕಾಯ ನಮಃ** ಇತ್ಯಾದಿ ಐದು ಮಂತ್ರಗಳಿಂದ ಪಂಚಾಂಗನ್ಯಾಸವನ್ನು ಮಾಡಬೇಕು. ಅಷ್ಟಾಕ್ಷರನ್ಯಾಸವನ್ನೂ ಮಾಡಬೇಕು. **ಉದ್ವಯದ್ಭಾಸ್ವತ್...** ಎಂಬ ಮಂತ್ರಗಳನ್ನು ಪಠಿಸಬೇಕು. ನಂತರ **ಆತ್ಮಾ ದೇವಾನಾಂ... ಯಜ್ಞೇನ ಯಜ್ಞಂ** ಎಂಬ ಎರಡು ಮಂತ್ರಗಳನ್ನು ಪಠಿಸಬೇಕು.

**ಆತ್ಮಾ ದೇವಾನಾಂ ಭುವನಸ್ಯ ಗರ್ಭೋ ಯಥಾವಶಂ ಚರತಿ ದೇವ ಏಷಃ । ಘೋಷಾ ಇದಸ್ಯ ಶೃಣ್ವಿರೇ ನ ರೂಪಂ ತಸ್ಮೈ ವಾತಾಯ ಹವಿಷಾ ವಿಧೇಮ ॥ ಋ.ಸಂ.10168.4॥**

**ಯಜ್ಞೇನ ಯಜ್ಞಮಯಜಂತ ದೇವಾಸ್ತಾನಿ ಧರ್ಮಾಣಿ ಪ್ರಥಮಾನ್ಯಾಸನ್ । ತೇ ಹ ನಾಕಂ ಮಹಿಮಾನಃ ಸಚಂತ ಯತ್ರ ಪೂರ್ವೇ ಸಾಧ್ಯಾಃ ಸಂತಿ ದೇವಾಃ ॥ಋ.ಸಂ.1.164.60॥**

ನಂತರ ಅವಗುಂಠನ, ಸಮ್ಮುಖೀಕರಣ, ಸನ್ನಿರೋಧನ, ಸನ್ನಿಧಾಪನ, ಸ್ಥಾಪನ, ಆವಾಹನ ಮುದ್ರೆಗಳನ್ನು ಪ್ರದರ್ಶಿಸಬೇಕು.

ನಂತರ ಕೈಯಲ್ಲಿ ತುಲಸೀಪುಷ್ಪವನ್ನು ಇಟ್ಟುಕೊಂಡು ಅಂಜಲಿಯನ್ನು ಘಟಿಸಬೇಕು. **ಭೋ ಸ್ವಾಮಿನ್ ಪೀಠಾವರಣದೇವತಾದಿಭಿಃ ಸಹ ಏಹಿ ಏಹಿ** ಎಂದು ಎರಡು ಬಾರಿ ಉಚ್ಚರಿಸಬೇಕು. ತನ್ನ ಅಂಜಲಿಯಲ್ಲಿ ಪೀಠಾವರಣ ದೇವತಾಸಹಿತನಾದ ಪರಮಾತ್ಮನು ಬಂದಿರುವುದಾಗಿ ಚಿಂತಿಸಬೇಕು. ಆ ಅಂಜಲಿಯನ್ನು ಎಡಮೂಗಿನ ರಂಧ್ರದ ಮೂಲಕ ಒಯ್ಯುತ್ತ ತಲೆಯ ಮೇಲೆ ಇಟ್ಟುಕೊಳ್ಳಬೇಕು. ಬಿಂಬರೂಪಿಯಾದ ಪರಮಾತ್ಮ ಎಡಮೂಗಿನ ಮೂಲಕ ಬ್ರಹ್ಮರಂಧ್ರವನ್ನು ಪ್ರವೇಶಿಸಿ ಸುಷುಮ್ನಾಮಾರ್ಗದಿಂದ ಹೃದಯಕಮಲವನ್ನು ಪ್ರವೇಶಿಸಿದ್ದಾನೆ ಎಂಬುದಾಗಿ ಚಿಂತಿಸಬೇಕು.

ಯಜಮಾನನಿಂದ ಪ್ರಾರ್ಥಿತನಾಗಿ ಪರಾರ್ಥ ಪೂಜೆಯನ್ನು ಮಾಡಿದಾಗ **ಧ್ಯೇಯಃ ಸದಾ...** ಎಂಬ ಮಂತ್ರದಿಂದ ದೇವರ ಧ್ಯಾನ ಮಾಡಬೇಕು.

ಆವಾಹನಾದಿ ಮುದ್ರೆಗಳನ್ನು ಹಿಂದೆ ಹೇಳಿದಂತೆ ವ್ಯುತ್ಕ್ರಮವಾಗಿ ತೋರಿಸಬೇಕು. **ಭೋ ಸ್ವಾಮಿನ್ ಪೀಠಾವರಣದೇವತಾದಿಭಿಃ ಸಹ ಏಹಿ ಏಹಿ** ಎಂದು ಪ್ರಾರ್ಥಿಸಿದ ನಂತರ ತುಲಸೀ-ಪುಷ್ಪಸಹಿತವಾದ ತನ್ನ ಅಂಜಲಿಯಲ್ಲಿ ಪರಮಾತ್ಮ ಬಂದಿರುವುದಾಗಿ ಚಿಂತಿಸಬೇಕು. ನಂತರ ಆ ಪರಮಾತ್ಮ ಸೂರ್ಯಮಂಡಲದಲ್ಲಿ ಪ್ರವಿಷ್ಟನಾಗುವನೆಂದು ಚಿಂತಿಸಬೇಕು.

**ಯಾಚೇಽಹಂ ತ್ವಾಂ ಹೃಷೀಕೇಶ ನಮಾಮಿ ಪುರುಷೋತ್ತಮ ।**
**ಹೃದಿ ಮೇ ಕುರು ಸಂವಾಸಂ ಶ್ರಿಯಾ ಸಹ ಜಗತ್ಪತೇ ॥**

**ಇತಿ ಪ್ರಾರ್ಥ್ಯ, ಹೃತ್ಪದ್ಮಂ ಪ್ರವಿಶ್ಯ ತತ್ರಸ್ಥರೂಪೇಣ ಏಕೀಭೂತಂ ಚಿಂತಯಿತ್ವಾ, ಸ್ವಯಮಪಿ ತತ್ತ್ವನ್ಯಾಸಮಾತೃಕಾನ್ಯಾಸೌ ಕುರ್ಯಾತ್ ।**

ಈ ಶ್ಲೋಕದಿಂದ ದೇವರನ್ನು ಪ್ರಾರ್ಥಿಸಬೇಕು. ಹೃದಯಪದ್ಮದಲ್ಲಿಯ ರೂಪದಿಂದ ಭಗವಂತ ಐಕ್ಯವನ್ನು ಹೊಂದಿದ್ದಾನೆಂದು ಚಿಂತಿಸಬೇಕು. ಸ್ವಯಂ ತಾನು ತತ್ತ್ವನ್ಯಾಸ-ಮಾತೃಕಾನ್ಯಾಸಗಳನ್ನು ಮಾಡಬೇಕು.

**ನಾಹಂ ಕರ್ತಾ ಹರಿಃ ಕರ್ತಾ ತತ್ಪೂಜಾ ಕರ್ಮ ಚಾಖಿಲಮ್ ।**
**ತಥಾಪಿ ಮತ್ಕೃತಾ ಪೂಜಾ ತ್ವತ್ಪ್ರಸಾದೇನ ನಾನ್ಯಥಾ ॥**

**ನ ಜಾನೇ ಕರ್ಮ ಯತ್ಕಿಂಚಿನ್ನಾಽಪಿ ಲೌಕಿಕವೈದಿಕೇ ।**
**ನ ನಿಷೇಧವಿಧೀ ವಿಷ್ಣೋ ತವ ದಾಸೋಽಸ್ಮಿ ಕೇವಲಮ್ ॥**

**ಮಂತ್ರತಸ್ತಂತ್ರತಶ್ಛಿದ್ರಂ ದೇಶಕಾಲಾರ್ಹವಸ್ತುತಃ ।**
**ಸರ್ವಂ ಕರೋತಿ ನಿಶ್ಛಿದ್ರಮನುಸಂಕೀರ್ತನಂ ತವ ॥**

**ತದ್ ಭಕ್ತಿಃ ತತ್ ಫಲಂ ಮಹ್ಯಂ ತತ್ ಪ್ರಸಾದಃ ಪುನಃ ಪುನಃ ।**
**ಕರ್ಮನ್ಯಾಸೋ ಹರಾವೇವಂ ವಿಷ್ಣೋಃ ತೃಪ್ತಿಕರಃ ಸದಾ ॥**

**ಮಾದೃಶೋ ನ ಪರಃ ಪಾಪೀ ತ್ವಾದೃಶೋ ನ ದಯಾಪರಃ ।**
**ದಾಸೋಽಯಮಿತಿ ಮಾಂ ಮತ್ವಾ ಕ್ಷಮಸ್ವ ಪುರುಷೋತ್ತಮ ॥**

**ರಕ್ಷತೀತ್ಯೇವ ವಿಶ್ವಾಸಸ್ತದೀಯೋಽಹಮಿತಿ ಸ್ಮೃತಿಃ ।**
**ಶರಣಾಗತಿರೇಷಾ ಸ್ಯಾದ್ವಿಷ್ಣೋರ್ಮೋಕ್ಷಫಲಪ್ರದಾ ॥**

**ಸ್ಥಿತಿಸ್ಸೇವಾ ಗತಿರ್ಯಾತ್ರಾ ಮತಿಶ್ಚಿಂತಾ ಸ್ತುತಿರ್ವಚಃ ।**
**ಅಹೋ ಸರ್ವಾತ್ಮಕೇ ವಿಷ್ಣೌ ಸುಧಿಯಾಂ ಸರ್ವದಾಽರ್ಚನಮ್ ॥**

**ಇತಿ ಸಂಪ್ರಾರ್ಥ್ಯ, ದ್ವಾತ್ರಿಂಶದಪರಾಧಾನ್ ವಿಸರ್ಜಯೇತ್ ।**

ಈ ರೀತಿಯಾಗಿ ದೇವರನ್ನು ಪ್ರಾರ್ಥಿಸಬೇಕು. ನಂತರ ಮುವ್ವತ್ತೆರಡು ಅಪರಾಧಗಳನ್ನು ದೇವರ ಮುಂದೆ ಹೇಳಿಕೊಂಡು ಕ್ಷಮಾ ಯಾಚಿಸಬೇಕು. ನಂತರ ಕೆಳಗಿನ ಶ್ಲೋಕಗಳನ್ನು ಪಠಿಸಿಕೊಳ್ಳಬೇಕು.

**ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ತಪಃ ಪೂಜಾಕ್ರಿಯಾದಿಷು ।**
**ನ್ಯೂನಂ ಸಂಪೂರ್ಣತಾಂ ಯಾತಿ ಸದ್ಯೋ ವಂದೇ ತಮಚ್ಯುತಮ್ ॥**

**ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ರಮಾಪತೇ ।**
**ಯತ್ಕೃತಂ ತು ಮಯಾ ದೇವ ಪರಿಪೂರ್ಣಂ ತದಸ್ತು ಮೇ ॥**

**ಕಾಯೇನ ವಾಚಾ ಮನಸೇಂದ್ರಿಯೈರ್ವಾಬುದ್ಧ್ಯಾತ್ಮನಾ ವಾಽನುಸೃತಃ ಸ್ವಭಾವಮ್ ।**
**ಕರೋಮಿ ಯದ್ಯತ್ ಸಕಲಂ ಪರಸ್ಮೈ ನಾರಾಯಣಾಯೇತಿ ಸಮರ್ಪಯಾಮಿ ॥**
**ಅಕ್ಷಯಂ ಕರ್ಮ ಯಸ್ಮಿನ್ ಪರೇ ಸ್ವರ್ಪಿತಂ ಪ್ರಕ್ಷಯಂ ಯಾಂತಿ ದುಃಖಾನಿ ಯನ್ನಾಮತಃ ।**
**ಅಕ್ಷರೋ ಯೋಽಜರಃ ಸರ್ವದೇವಾಮೃತಃ ಕುಕ್ಷಿಗಂ ಯಸ್ಯ ವಿಶ್ವಂ ಸದಾಽಜಾದಿಕಮ್ ॥**

**ಪ್ರೀಣಯಾಮೋ ವಾಸುದೇವಂ ದೇವತಾಮಂಡಲಾಖಂಡಮಂಡಲಮ್ ॥**
**ಪ್ರೀಣಯಾಮೋ ವಾಸುದೇವಮ್ ॥**

**ಅನೇನ ದೇವಪೂಜಾತ್ಮಕೇನ ಕರ್ಮಣಾ ಅಸ್ಮದ್ಗುರ್ವಂತರ್ಗತ ತತ್ತ್ವದೇವತಾಂತರ್ಗತ ಶ್ರೀಭಾರತೀರಮಣಮುಖ್ಯಪ್ರಾಣಾಂತರ್ಗತ ಬಿಂಬರೂಪಾಭಿನ್ನಃ ಕುಲದೇವತಾಭಿನ್ನಃ ಶ್ರೀಲಕ್ಷ್ಮೀನಾರಾಯಣಃ ಪ್ರೀಯತಾಂ ಪ್ರೀತೋ ಭವತು ॥**

**॥ಶ್ರೀಕೃಷ್ಣಾರ್ಪಣಮಸ್ತು ॥**

ನಾನು ಮಾಡಿದ ಈ ಪೂಜೆಯಿಂದ ನಮ್ಮ ಗುರುಗಳ ಅಂತರ್ಯಾಮಿಯಾದ ತತ್ವದೇವತೆಗಳ ಅಂತರ್ಯಾಮಿಯಾದ ಭಾರತೀರಮಣಮುಖ್ಯಪ್ರಾಣನ ಅಂತರ್ಯಾಮಿಯಾದ ಬಿಂಬರೂಪದಿಂದ ಅಭಿನ್ನನಾದ ಕುಲದೇವತೆಯಿಂದ ಅಭಿನ್ನನಾದ ಶ್ರೀಲಕ್ಷ್ಮೀನಾರಾಯಣನು ಪ್ರೀತನಾಗಲಿ ಎಂಬುದಾಗಿ ಪ್ರಾರ್ಥಿಸಿ ಈ ಪೂಜೆಯನ್ನು ದೇವರಿಗೆ ಸಮರ್ಪಿಸಬೇಕು.

**॥ಶ್ರೀಕೃಷ್ಣಾರ್ಪಣಮಸ್ತು ॥**

